ಮಾ



ಬಾ ಅಹಲ್ಯೆ, ಏನ ನೋಡು
ಹೊತ್ತು ಮುಳುಗುವ ಸಮಯವಾಯಿ
ಹನಿವ ತೆರದೊಳು ಮೋಡ ಕಟ್ಟಿದೆ.
   ಮಗನನೆಂದೂ ಕಾಣೆಯಾ ?



ಅಹಲ್ಯೆ

(ಗುಡುಗನ್ನು ಲಾಲಿಸಿ ಕಾತರಗೊಂಡು)

ದೇವದುಂದುಭಿಯೊ, ಸುರರಣಭೇರಿಯೊ,
   ಏನೊ ಕಾಣೆ, ಸಖಿ, ಲಾಲಿಸದ !
ಕೇಳಕೇಳುತಿರೆ, ನನಗಿಳೆಯಾಸರೆ
   ತಪ್ಪಿದೊಲಪ್ಪುದು, ಲಾಲಿಸಿದ !
ಮನ ಉನ್ಮಾದಕ, ಚಿತ್ತಭ್ರಾಮಕ
ನಾದ ಇದಾಲಿಸು ನೀ ಗೆಳತಿ !
ತಿರೆಗಿದು ಸಲ್ಲದು, ಸ್ವರ್ಗದ ಸಂಚಿದು ;
   ದಿಟ ಎದೆಗೆಟ್ಟಿಹೆ ನಾ ಗೆಳತಿ !

(ಇವರ ಮಾತನ್ನು ಕೇಳಲು ಉತ್ಸುಕನಾದ ಇಂದ್ರನ ಚಲನದಿಂದ ಉಂಟಾದ ಹೊಳಪನ್ನು ನೋಡಿ)

ಅಲ್ಲಗೊ ನೋಡದ ! ತೇಜಃಪುಂಜದ
   ರೂಪವೊಂದು ತೋರಿ.
ಕಣ್ಕೋರೈಸಿತು ಹಳುವೊಳು ನುಸುಳಿತು—
   ಮುಂದೆ ಏನೆ ದಾರಿ ?

ಮಾಧವಿ-

ಮೂಡಣ ಬಾನೊಳು ಮೋಡವು ಗುಡುಗಲು
   ಏಕೀ ಕವಿತೆಯನೊರೆವೆ ಸಖಿ ?

ಇತ್ತಣೆನತ್ತೆಡೆ ಮಿಂಚು ಹರಿದೊಡೆ,
ಏಕೀ ಕಾತರ ನಿನಗೆ ಸಖಿ ?

ಅಹಲ್ಯೆ

ಇಂತೆಯೆ ಗೆಳತಿ, ಭ್ರಮಿಸಿದೆ ಮನ್ಮತಿ ;
ಬೆಳಗಿನಿಂದಲೀ ತೆರನಾಯ್ತು !
ಕಾಣದ ನೋಟವ ಕೇಳದ ನಾದವ
ಕಾಣುವ ಕೇಳುವ ತೆರನಾಯ್ತು !

ಮಾಧವಿ

ಏತಕಹಲ್ಯೆ, ನಿನಗೀ ತೆರ ಭಯ ?
ತವಕವಿದೇತಕೆ ಇನಿಸೊಂದು ?
ಏಕೀ ಹಲ್ಲಣ, ಏಕೀ ತಲ್ಲಣ,
ಏಕೀ ಹುಸಿಬಗೆ ನಿನಗಿಂದು ?

ಅಹಲ್ಯೆ

ಅಮರಾವತಿಪತಿ ಕೆರಳಿದೊಡೇಗತಿ
ರಂಭೆಗಿಲ್ಲಾದ ಅವಮತಿಗೆ ?
ಆತ ಮುಳಿದೊಡೆ ಉಂಟೆ ಉಳಿಗಡೆ—
ಇದೆ ಹದನಾಯಿತು ಅಂಜಿಕೆಗೆ !

ಮಾಧವಿ

ಇದಕೀ ರೀತಿಯೆ, ಇದಕೀ ಭೀತಿಯೆ,
ಗೌತಮಸತಿಗಿದು ತರವೆ ?
ದೀಪಕ್ಕೆ ಹಾರಿ, ನೊಂದಳಾ ಪೋರಿ—
ಮುಳಿಯಲಿಂದ್ರಗಿದು ಕತವೆ ?
ಮುಳಿದರೇನು, ಸಖಿ, ನಿನಗೇನಂಜಿಕೆ.
ರುದ್ರನಂಥ ಪತಿ ನಿನಗಿರಲು,

ಆರೇಗೈವರು ? ಹುಸಿ ನಿನ್ನಾಸರು
ಪತಿಯನರಿಯೆ—ಇಹೆ ಸನಿಯದೊಳು !

ಅಹಲ್ಯೆ

ರುದ್ರನೆ ಸರಿ ! ಏ ಮುಳಿಸೇ !—ಸಖಿ ನಿನ್ನೀ ಮಾತು
ತವಕದ ಶಮನಕ್ಕಾಗದೆ, ಹೆಚ್ಚಳಕೇ ಆಯ್ತು
ನನ್ನಿಂದಿನ ಹಳಹಳಿಕೆಗೆ ಕಾರಣ ತಾನೇನೋ,
ನಾನೇ ಕಾಣೆನು, ಮಾಧವಿ ಮೂಲವದೇನೇನೋ ?

ಈ ತಪವನು ತಾ ಕೊಳ್ಳದೆ ನನ್ನಯ ಎಡೆಯೊಳಗೆ
ಅವರಿದ್ದೊಡೆ !—ಇದೆ ಹಂಬಲವಾಯಿತು ಸಖಿ ನನಗೆ.
ಈ ನೇಮದ ಹಿಂಬದಿಗಿಹ ಹೆಬ್ಬಯಕೆ ಅದೇನೆ,
ಅರಿತಿಹೆಯಾದೊಡೆ ಗೆಳತಿ, ಪೇಳೆಂದೆನ್ನಾಣೆ.

ಮಾಧವಿ

ಇದನರಿಯೆಯ ನೀ ಅಹಲ್ಯೆ ? ಎನಗಿದು ಸೋಜಿಗವು.
ಮೂಜಗವನೆ ಗೆಲುವುದಲಾ ಈ ಯೋಗದ ಬಲವು !
ಏನೆಂದೊಡೆ ಸಿದ್ಧಿಪುದದು ಬಯಸಿದ ಮರು ಚಣವೆ !
ಈ ಶಕುತಿಗು ಮಿಗಿಲಿಲ್ಲವು, ಅದ ಬಣ್ಣಿಸಲಳವೆ ?

ಈ ಬಲಮಿರೆ ಆ ಮನುಜನ ಬಯಕೆಯು ಬಾಧಿಸದು—
ಸ್ವರ್ಗದೊಳಾಗದ ಭೋಗದ ಸೊಗದಾ ತಣಿವಹುದು !
ದೆಸೆಯೊಡೆಯರು ಕಂದುವರೀ ಮಹಿಮನ ತೇಜಕ್ಕೆ ;
ದೇವೇಂದ್ರನೆ ಅಂಜುವನೀ ಯೋಗಿಯ ಓಜಕ್ಕೆ !

ಅಹಲ್ಯೆ

ಇದರಿಂದೆನಗೇನಹುದೇ ಮುನಿಗೀ ಮಹಿಮೆ ಬರೆ ?

ಮಾಧವಿ

ಏಕಿಂತೊರೆವೆ ; ಅಹಲ್ಯೇ, ಏಕೀ ಬೇಸರವೆ ?
ಪತಿಗಚ್ಚಿನ ಮೆಚ್ಚಿನ ಸತಿ—ನೀನೇಕಿದ ಮರೆವೆ ?

(ಅಹಲ್ಯೆ ನಗುವಳು.)

ಮಾಧವಿ

ಈ ಬಲವಿರೆ, ಈ ಒಲವಿರೆ, ತಾನೊಲಿದಳ ಬಯಕೆ
ಇಚ್ಛೆಪೊಡೇ ತೀರಲು ಬರೆ, ಸಲಿಸರೆ ನಿನ್ನರಕೆ ?
ನೀ ಬಯಪೊಡೆ ಅಮರಾವತಿ ಹೊಳಲಾಳುವರವರು,
ಇಂದ್ರನ ಮಿಕ್ಕಿಂದ್ರಾಣಿಯ ತೆರ, ಸಖಿ, ಬಾಳಿಪರು !

ಅಹಲ್ಯೆ.

ಏನೊರೆವೆಯೊ ಸಖಿ, ಮಾತಿದ ನಂಬುವೆ ನಾನೆಂತು ?
ಅರಿಯದ ಹಸುಳೆಯ ನೆಚ್ಚಿಸೆ ನುಡಿವಳು ತಾಯಿಂತು.
ಮೂಲೋಕವೆ ಶರಣೆನ್ನುವ ಸುರಪುರಿಮೊರೆಯೆಲ್ಲಿ ?
ಆತನ ಹಸಾದವೆರೆಯುವ ತಿರೆಯುವರಾವೆಲ್ಲಿ ?

ಬಗೆಬಗೆ ಯಾಗದೊಳೋಲಿಸುತ, ಯಜ್ಞದಿ ನುತಿಸುತ್ತ
ಬಗೆಬಗೆ ಹರಕೆಯನೊಪ್ಪಿಸಿ, ನೇಮಗಳಪ್ಪುತ್ತ
ಕೊಡು ಕಾಪಿಡು ಎಂದೆನ್ನುತ, ದಿನವಾತನ ಬೇಡಿ
ಬದುಕನು ನಡೆಸುವ ನಾವೆಂತವಗಪ್ಪೆವು ಜೋಡಿ !

ಅವನಿಂ ಮಳೆ, ಅವನಿಂ ಬೆಳೆ, ಅವನಿಂದಲೆ ಸುಗ್ಗಿ —
ಹದುಳಕೆ ಹೊಣೆ ಅವನಿರದಿರೆ, ತಿರೆ ಪೋಪುದು ಮುಗ್ಗಿ !
ಎಲ್ಲಾ ರಾಗದ ಭೋಗದ ವೈಭವದರಸವನು !
ನೋವಿನ ಸಾವಿನ ಬಾಳಿನ ನರರಪ್ಪರೆ ಸಮನು ?

ಸಿಡಿಲೇಟಿಗೆ ಅಬ್ಬರಿಸುವ ಕೊಬ್ಬಿದ ಮುಗಲೇರಿ
ಅಂಕೆಯೆ ಅಂಕುಶ ಮಿಂಚಲು, ಮೊಳಗಲು, ಸುರಭೇರಿ

ಜಗವಾತುರಗೊಳ್ಳುವ ತೆರ ಮೆರೆವಾ ಸುರಪತಿಗೆ
ಅರೆಣೆ ಮಾಧವಿ, ಪೇಳಾ ಭೀಕರಮುಂಗಳಗೆ ?

ಇಂತೆಂದೊಡೆ, ಪತಿದೇವರ ನಂಬೆನು ನಾನೆಂದು
ಭಾವಿಸದಿರು, ನೀ ; ಅವರಿಂ ಪಿರಿದಲ್ಲೆನಗೊಂದು.
ಆದೊಡೆ ಬಲ್ಲಿದನಿಂದ್ರನು ಹಿರಿಯನು ಲೋಕಕ್ಕೆ !
ಅವನೆದುರಿಸಿ ನಾವಿರುವೊಡೆ ಆಗದು ಕ್ಷೇಮಕ್ಕೆ.

ನೋಡಲೆ ಮಾಧವಿ, ಮೋಗಡೆ ಕಪ್ಪಿಡಿದಿದೆ ಬಾನು ;
ಮಳೆಮುಗಿಲುರವಣಿಸುತ್ತಿದೆ ; ತೋರಿದೆ ಶಕ್ರಧನು.
ಮಿಂಚಿನ ಕೆಂಚುರಿ ನಾಲಗೆ ನಮ್ಮನೆ ನೊಣೆವಂತೆ
ತಹತಹಿಸಿದೆ ಗುಡುಗಾಗಿದೆ ನಮ್ಮನೆ ನಗುವಂತೆ !

ಮುಯ್ಯೆಸಗಲು ಮನಮಾಡಿರುವಿಂದ್ರನ ಸನ್ನಾಹ
ಇಂತಲ್ಲದೆ ಬೇರಿಲ್ಲವು—ಇದು ನಿಸ್ಸಂದೇಹ !
ನಮ್ಮೆಸಕಕೆ ಮುಳಿದಾತನ ಸಿಡಿಲೆರಗುವ ಮುನ್ನ
ಮರೆಹೊಕ್ಕಾತಗೆ ಮೊರೆಯಿಡದಿರೆ ತಪ್ಪದು ಬನ್ನ.

ಮಾಧವಿ

ಸಲ್ಲದ ಭಯವಿದು, ಕಾಲಕೆ ತಕ್ಕುದು ಈ ಮುಗಿಲು ;
ಹದಗೆಟ್ಟಿದನೇ ಚಿಂತಿಸಿ ನಿನಗಾಯ್ತೀ ದಿಗಿಲು.
ಈ ಅಳುಕಿರೆ, ಬಾ ಕಳಶವನಿಟ್ಟಿಂದ್ರನ ಎರೆವ—
ಆ ಪೂಜಾಪ್ರಿಯ ದೇವನು ತಪ್ಪದೆ ನಮಗೊಲಿವ.

ಅಹಲ್ಯೆ

ಒಳ್ಳಿತನೊರೆದೆಯೆ ಗೆಳತಿ,—ಮನಕೊಪ್ಪಿನ ಮಾತು !
ಹದುಳವ ಹರಸುವ ಬಾರೇ ನಾವಿಂದ್ರಗೆ ನೋಂತು.
ತಪದಾಣದೊಳಿರುವಗ್ನಿಯ ನಿತ್ಯದ ಪೂಜೆಯನು
ಸಲ್ಲಿಸಿ ನಾ ಬಹೆ ಮೊದಲೊಳು, ಕೊಳಲೀ ಪೂಜೆಯನು.

ನನ್ನೆಳೆಯನು ಹಂಬಲಿಸದ ತೆರ ನಾ ಬಹ ವರೆಗೆ
ನೋಡಿಕೊ, ಸಖಿ; ನಾ ಪೋಪೆನು ಸ್ವಾಮಿಯ ಸನ್ನಿಧಿಗೆ.
ದೇವರು ಮುಳಿವೀ ತಪವನು ಕೊನೆಗಾಣಿಸಿರೆಂದು
ಎಚ್ಚತ್ತಿರೆ ಪತಿದೇವರ ಬೇಡುವೆ ನಾನಿಂದು.

ಮಾಧವಿ

ನೀನೆಳಸಿದ ತೆರನಾಗಲಿ! ಬಾ ಬೇಗನಹಲ್ಯೆ.

(ಹೋಗುವರು.)

ಮದನ

(ಆ ಕಡೆ ಕಾಣಿಸಿಕೊಂಡು, ಅಹಲ್ಯೆ ಹೋದ ಕಡೆಯನ್ನು ಬೆರಗುಗೊಂಡು ನಿಟ್ಟಿಸುತ್ತಿರುವ ಇಂದ್ರನನ್ನು ಕಂಡು)

ನೋಡುತಿದ್ದರು ಕಾಣಲೊಲ್ಲದೆ, ಬಯಲ ನಿಟ್ಟಿಪ ನೋಟದಿ
ಏನ ನೋಡುತ ನಿಂತೆ ವಾಸವ, ಇಂತು ಬೆರಗಿನ ಮಾಟದಿ?

ಇಂದ್ರ

ಏನು ಹೇಳಲಿ, ಮದನ, ಅಜ್ಜನ ಮಾಟಗಾರಿಕೆ ಎಂಥದೊ
ಚೆಲುವ ರೂಪಿನ ತಿರುಳ ಬಲ್ಲೆ ಕಣ್ಣಿಗೂ ಬೆರಗಾದುದೊ!
ದಿತಿಯ ಮಕ್ಕಳನಂದು ವಂಚಿಸಲಾದ ಮೋಹಿನಿಯಂದದಿ
ಬನದಿ ಸುಳಿದೀ ಹೆಣ್ಣ ಮಾಟಕೆ, ಆದೆ ಮನವುಳಿವಂದದಿ.

ಹೊಮ್ಮುಕಳೆಯಿಂದಮರಯೌವತವನ್ನೆ ಜರೆಯುವ ವೈಸಿರಿ
ಅಂತಿದಲ್ಲವು ಇಂತಿದಲ್ಲವು ಹೊಸತು ಹೊಸತೆನುವಚ್ಚರಿ!
ನೋಡನೋಡಲು ನೋಡುವಾಸೆಯು ಕಡಲು ಉಕ್ಕುವತೆರದೊಳು
ನನ್ನತನದೆಲ್ಲೆಯನೆ ಮೀರಲು ನಿಂದೆ ನಾನಳಿದರಿವೊಳು.

ಸಂಜೆಗೆಂಪಿನೊಳೆಸೆವ ಬಿದಿಗೆಯ ಪೆರೆಯ ಕಾಂತಿಯ ನಿಂದಿಸಿ
ದಂತಕಾಂತಿಯು ಮಿನುಗಲಧರದಿ, ನೋಳ್ಪ ಚಿತ್ತವ ಬಂಧಿಸಿ
ನುಡಿವ, ನುಡಿಗೂ ಮಿಕ್ಕು ಬಂದುದ ಕಣ್ಣು ಹೊಳೆಯಿಸುವಂದದಿ
ಭಾವಜನಕನೆ, ಭಾವನೆಂತೊಗೆತಂದಿತೀಕೆಯ ಹೃದಯದಿ!

ಕಿವಿಗೆ ಹೊಸ ಸೊದೆಯನ್ನೆ ಕರೆಯುವ ಮಾತೊಳೆನ್ನನು ಬಣ್ಣಿಸಿ
'ನನ್ನಿ, ನನಗೆಣೆಯಾರು ಲೋಕದೊಳೆ'ಂದು ಮನದೊಳಗೆನ್ನಿಸಿ,
ನನ್ನ ಮಹಿಮೆಗೆ ಮೋಹಗೊಳ್ಳುತ, ನನ್ನ ಹಿರಿಮೆಗೆ ಬೆದರುತ
ನನ್ನನೇ ನೆನೆದಿದ್ದ ಮುಗುದೆಗೆ ಸಿಂತೆನ್ನೈ ಮನ ನೀಗುತ.

ಮದನ

ಸರಿಯೆ, ವಾಸವ, ಒಳ್ಳಿತೆಸಗಿದೆ! ಬಂದುದಾಯಿತು ಸಾರ್ಥವು!
ಹೆಣ್ಣ ನೋಡುತ ನಿಂತೊಡಾಯಿತೆ ಮುನಿಯು ಗೆಲ್ಲುವ ಕಾರ್ಯವು?

ಇಂದ್ರ

ದಿಟ, ಮದನ, ಮರೆತಿದ್ದೆ ನಾನಿದ; ಏನು ಮುಂದಿನ ಮಾಟವು—
ಮುನಿಯು ಬಲವೆಂತವನ ಬಗೆಯೆಂತವನ ಗೆಲ್ಲುವ ಹೂಟವು?

ಮದನ

ಬಿಡು ಬಿಡೀತನ ಭಯವ ವಾಸವ, ಹೂಡಿಹೆನು ನಾ ಹೂಟವ;
ಇವನ ಸತಿಯಿಂದಿವನ ಗೆಲ್ಲುವೆ, ನೋಡು ನನ್ನೀ ಮಾಟವ.
ತಪೋಲುಬ್ಧಗೆ ನೇಮಬದ್ಧಗೆ ಸರಸಕಾಮವಿರುದ್ಧಗೆ
ತೋರಿ ನಾನಿಂದೊಲುಮೆ ಹುರುಳನು. ಸೆಳೆವೆ ರಾಗದ ಹಾದಿಗೆ.

ಇಂದ್ರ

ಧರ್ಮಕಾದವಳಿವಳು; ಇವಳಿಂ ಮುನಿಯು ಕೆಡಿಸುವೆನೆಂಬೆ ನೀ!
ಏನು ಸಂಚದು, ನಿನ್ನ ಕಜ್ಜಕೆ ಅಪ್ಪಳೆಂತೀ ಭಾಮಿನಿ?

ಮದನ

ಹೆರರಂಗನೆಯೇಂ ತನ್ನಂಗನೆಯೇಂ—
ಮೋಹದಿ ಕೆಡೆವೊಡೆ ಈ ನೆವ ತಡೆಯೇಂ?
ನೀತಿಯ ನೆವದೊಳು ರಂಭೆಯು ಗೆದ್ದಂ,
ನೀತಿಯ ನೆವದೊಳೆ ಕಾಮಗೆ ಬಿದ್ದಂ!

ಮುನಿಯೊಳು ಹದುಗಿಹುದೈ ಸತಿಯಾಸೆ
ಮಾಗಿಯೊಳಿರುವೊಲು ಬಸಂತದಾಸೆ.
ಇಂದಾಗಲು ಈ ಕಾಮುಕೆ ಮುಕ್ತಿ
ಕುಂದಲು ಈತನ ಸಂಯಮ ಶಕ್ತಿ—
ಕೂರಂಬಿಟ್ಟೆನು ಕೇಕರದೊಳಗೆ ;
ಇವಳೊಗೆಯಲು ಇದ ಗೌತಮನೆದೆಗೆ
ವಿಭ್ರಮದಿಂದಪ್ಪನು ಸ್ವಚ್ಛಂದ ;
ಮೋಹದಿ ತೊಳಲನೇನದು ಚಂದ !
ಇಂದೀತನು ನನ್ನಂಬಿಗೆ ಹವಣು !
ಹದನಿಲ್ಲದೆ ಮದನನು ವರ್ತಿಸನು.
ತಮ್ಮನು ತಾವೇ ವಂಚಿಸುತಿಹರಂ
ವಂಚಿಸಲಲ್ಲವೆ ಇಹುದೀ ಚದುರಂ ?
ನೀತಿಯ ನೆವದೊಳೆ ಒಲವಂ ಗೆದ್ದಂ,
ನೀತಿಯ ನೆವದೊಳೆ ಒಲವಿಗೆ ಬಿದ್ದಂ !

ಇಂದ್ರ

ಬಲು ಠಕ್ಕಿನವಂ ಸೈ ನೀ ಕಂತು !
ನಿನ್ನ ಮರ್ಮವನು ಅರಿವೆನದೆಂತು ?

ಮದನ

ಅರಿಯಲು ಬಯಸುವೆಯಾದೊಡೆ ಬಾರಾ
ಗೌತಮ ತಪವಿಹ ತಾಣಕ್ಕೆ.

ಇಂದ್ರ

ಅಂತೇ ನಡೆ ನಡೆ, ಒಲವೇ. (ತನಗೇ ತಾನೆ) ನಾನೂ
ಸಲಿಪೆನು ಕಾಣಿಕೆ ನೋಟಕ್ಕೆ.

(ಹೋಗುವರು.)

ತೆರೆ

## ದೃಶ್ಯ ೪

(ಗೌತಮನ ತಪಃಸ್ಥಾನ. ಮುಂದೆ ಒಂದು ಪಾರ್ಶ್ವದಲ್ಲಿ—ಅಗ್ನಿಯ ಬಳಿ—ವಟು ಮತ್ತು ಮೈತ್ರೇಯ ಇರುವರು. ಮತ್ತೊಂದು ಪಾರ್ಶ್ವದಲ್ಲಿ—ಮರದ ಕೆಳಗೆ—ಧ್ಯಾನಸ್ಥನಾಗಿ ಗೌತಮನಿರುವನು. ವಟು ಮತ್ತು ಮೈತ್ರೇಯರ ಕಡೆಗೆ ಬೆಳಕು ಹೆಚ್ಚಾಗಿ ಬಿದ್ದಿರುತ್ತದೆ. ಗೌತಮನು ನೆರಳಿನಲ್ಲಿ ಇರುತ್ತಾನೆ.)

ವಟು

ಬುವಿ ಬಾನಳೆದುರವಣಿಸಿದ
ಹರಿಪಾದಕೆ ತಲೆಯೊಡ್ಡುತ
ಕೆಳಲೋಕಕೆ ತೆರಳುತ್ತಿಹ
ಬಲಿದೊರೆಯಂದದೊಳು—

ಮಿಗುವಿರುಳಿನ ನಿಡು ನೀಡಿದ
ದೆಸೆ ಮೆಟ್ಟಿದ ಮುಗಿಲಡಿಯಡಿ
ಮರೆಯಾದುದು ಪಗಲ್ಸಿರಿ
ಪಡುವಣ ಕಮರಿಯೊಳು

ಮೈತ್ರೇಯ

ರವಿಮಂಥಿತ ನೀಲಾಂಬುಧಿ
ಹೆತ್ತಿತು ಕೆನೆ ಇದಿಗೋ ಎನೆ
ಹೆಪ್ಪಿನ ಕಪ್ಪಿನ ಮೋಡವು
ಕಟ್ಟಿದೆ ಬಾನಿನೊಳು;

ಮೋಹದ ಹುದುಲೊಳು ಮುಳುಗುವ
ತಾಮಸಿಯಾತ್ಮದ ತೆರದೊಳು
ಸಂಜೆಯು ಚೆಂಬೆಳಗಿಳಿಯಿತು
ತಾಮಸಿಯೊಡಲಿನೊಳು.

ವಟು

ಕೂರ್ಮನ ಬೆನ್ನಿಂದೇಳುವ
ಮಂದರಪರ್ವತದಂದದಿ,
ಚಣಚಣಕೂ ಹಿರಿದಹುದೀ
ರೋದೋಂತದ ಮುಗಿಲು;
ಫಳ್ಳನೆ ನೀಳ್ ಮಿಂಚಿದಿಗೋ
ದೇವಾಸುರರೆಳೆದಾಟಕೆ
ಚಣಚಣಕೂ ಹೊರಳಾಡುವ
ವಾಸುಕಿತನು ಎನಲು.

ಮೈತ್ರೇಯ

ಅದೊ! ಅತ್ತಿಡೆ ಆ ಮರದೆಡೆ
ಮೆಲುಮೆಲ್ಲನೆ ಪದವಿಕ್ರಮ,
ನಿದ್ರಾಲೋಕದಿ ಮೂಡುವ
ಕನಸಿನ ರೂಪಂತೆ!—

ಬಹರಾರಿದು, ಈ ನಸುಕೊಳು
ಪರಿಚಿತರಂತೀ ಹಳುವೊಳು?
ತಪಭಂಗಕೆ ಹೊಂಚಿಹನೋ
ಅಬಲಾಬಲನಿಂತೆ?

ವಟು

ದಿಟ, ಗುರುಗಳೆ, ನೀವೊರೆದುದು;
ಇರಬೇಹುದು ಜೆಚ್ಚರದೊಳು.
ಏಗಳಿಗೆಗೆ ಏನುಹುದೋ?
ಬಲು ತಂತ್ರಿಗಳಿರುವರು!

ಆದೊಡೆ, ನಿಟ್ಟಿಸಿರಾರ್ಯ,—
ತಾಪಸವೇಷದ ಹೆಂಗಸು—

ಗುರುಪತ್ನಿಯು ನಡೆ.—ಆಕೆಯೆ !
ಈ ಎಡೆಗೇ ಬಹರು.

ಮೈತ್ರೇಯ

ದಿಟವಾಗಿಯುಂ ಆಕೆಯೆ ಸರಿ !
ಪೋ, ವತ್ಸಾ. ನೀ ಮುನ್ನಡೆ-
ದವರಿಲ್ಲಿಗೆ ಕರೆತಾರೈ
ತಮಕಂಜದ ತೆರದಿ.
ನಾನಿಲ್ಲಿನ ಸಪ್ತಾಗ್ನಿಯು
ಕಿರಿಬೇಗೆದೊಳುದ್ದೀಪಿಸೆ-
ನೀ ತಾಣವು ಸ್ವೈಷ್ಯರ್ಯವ
ತುಸ ನೀಗುವ ತೆರದಿ.

(ಅಹಲ್ಯೆ ವಟುವಿನೊಡನೆ ಮಾತನಾಡುತ್ತ ಪ್ರವೇಶಿಸುತ್ತಾಳೆ.)

ಅಹಲ್ಯೆ

ಇರುಳಿಟ್ಟಣಿಸಿದೆ
ಮುಗಿಲೊಡ್ಡಣಿಸಿದೆ
ಮೌನದೊಳದ್ದಿದೆ ಬನವೆಲ್ಲಾ !
ಬಳಕೆಯ ನೆಲವಿದು
ಏತೆರನಾದುದು
ಅಂಜಿಪುವೀ ತರುಗಿಡುವೆಲ್ಲಾ !

ರಕ್ಷೆಯುದಾವುದು
ನಿಮ್ಮನು ಕಾವುದು ?
ನೀವೆಂತನುಜಾ, ಎಡೆಗೆಡದೆ
ಒಂಟಿಯೊಳೀ ಪರಿ
ರಾತ್ರಿಯು ಕಳಿವಿರಿ,
ಬಗೆಬಗೆದನಿಯೀ ಕಾನನದೆ ?

ವಟು

ಹವಿತುಷ್ಟಾಗ್ನಿಯ
ಮುಖದೊಳಗೇಭಯ ?
ತಾಯೇ, ರುದ್ರನ ತೆರದೊಳಗೆ
ಗುರುವಿರಲಾಪದ-
ಕೆಂತಹುದಾಸ್ಪದ !
ನೆಮ್ಮದಿಯಲ್ಲದೆ ಏನೆಮಗೆ ?

ಅಹಲ್ಯೆ

ದಿಟ ದಿಟ ! ಕೌಶಿಕ !
ನಗುತೀ ಪಾವಕ
ದಟ್ಟಿಸುತಿಹನೀ ತಮವನ್ನು ;
ಮತ್ಪತಿದೇವನ
ಮಂಗಳ ದರ್ಶನ
ಅಡಗಿಸುತಿದೆ ತಲ್ಲಣವನ್ನು.

ಮೈತ್ರೇಯ

(ಮುಂದೆ ಬಂದು)

ಹೊತ್ತಾಯ್ತತ್ತಿಗೆ
ಅಗ್ನಿಯ ಪೂಜೆಗೆ
ಬಾನ್ ಮುನಿದಿಹುದಾಲಿಸಿ ಸೊಲ್ಲ.
ಚಣದೊಳೆ ಹನಿವುದು,
ತಳುವಿದೊಡಾಗದು ;
ಏಳಿರಿ, ಅಣಿಯಾಗಿಹುದೆಲ್ಲ-

ಅಹಲ್ಯೆ

ಆಯಿತು ಅಣ್ಣ ;
ನಿಮ್ಮೀ ಬನ್ನ
ಎಂದಿಗೆ ಮುಗಿವುದು ?—ಮನದೊಳಗೆ
ಹದುಳವ ನೀಗದೆ
ಕೇಡನು ಹಾರದೆ
ಎಂದೊಂದುವೆವೈ ಮನೆಯೊಳಗೆ ?

ಈ ತಪವೇತಕೆ ?
ಈ ಚಟವೇತಕೆ ?
ಸಿದ್ಧಿಯದೇನಹುದಿದರಿಂದ ?
ದೇವರೊಳೇತಕೆ
ನಮಗೀ ಹೋರಿಕೆ ?
ಹಿತವೇನಹುದೀ ಹಗೆಯಿಂದ ?

ಪತಿಯೀ ಮನವನು
ಮರಳಿಸುವನುವನು
ಕಾಣರಿ, ಅಣ್ಣಾ ನೀವಿಂದು,
ಮಂಗಳವಲ್ಲದ
ಆವುದೊ ಪೊಲ್ಲದ
ಶಂಕಿಸುತಳುಕಿಹೆ ನಾನಿಂದು.

ಮೈತ್ರೇಯ

ಏತಕೆ ಅತ್ತಿಗೆ
ನಿಮಗಿಂದೀ ಬಗೆ :
ಹದನೇನಿಹ ದಿಲ್ಲಂಜಿಕೆಗೆ ?

ತಪವಂ ಗಳಿಪುದು
ಮುನಿಜನಕಾದುದು
ಎಡರೇನಿಹುದಿಲ್ಲಸುರರಿಗೆ ?

ಆತ್ಮೋದ್ದೀಪನ-
ಕಾದೀ ಸಾಧನ
ಲೋಕದ ಕಲ್ಯಾಣಕೆ ಆಯ್ತು ;
ದುರುಳರು ದೌಷ್ಟ್ಯದಿ
ಮರುಳರು ಮೌಢ್ಯದಿ
ನಯಗೆಡೆ, ಹದ್ದಿ ಸೊಳಿಡಲಾಯ್ತು.

ಈ ತಪಬಲವಿರೆ
ಅಮರಾವತಿದೊರೆ
ತಲೆಬಾಗಿಪನೆಮ್ಮೋಜಕ್ಕೆ !
ಈ ಬಲ ಮಿಗಿಲು,
ಏಕೀ ದಿಗಿಲು ?
ನಡೆಯಿರಿ ಅಗ್ನಿಯ ನೇಮಕ್ಕೆ.

ಅಹಲ್ಯೆ

ದಿಟ ! ಸಲ್ಲದು ಭಯ ;
ನಾನೀ ಪೂಜೆಯ
ಮುಗಿಸುವೆ ಬೇಗನೆ, ಅಣ್ಣಯ್ಯ.
ಇತ್ತೆಡೆ ಬಾರ್ರೈ,
ಕೌಶಿಕ ತೋರ್ರೈ
ಪಾವಕನರ್ಚಿಸೆ ತಕ್ಕಣಿಯ.

(ಅಗ್ನಿಯ ಬಳಿಗೆ ಹೋಗಿ ಪೂಜೆಯನ್ನು ಪ್ರಾರಂಭಿಸುವರು.)

(ಮದನ ಮತ್ತು ಇಂದ್ರ ಕಾಣಿಸಿಕೊಳ್ಳುತ್ತಾರೆ.)

ಮದನ

ಇದುವೆ ಆ ತಪದಾಣ! ಅಲ್ಲಗೋ ಗೌತಮನು
　ಧ್ಯಾನಮುದ್ರಿತವದನ ಭೀಮದರ್ಶನನು!
ಅದ್ರಿಕನ್ಯಾವಿಮುಖ ಇಂತೆಯಲ ತಪವಿದ್ದ :
　ಎಂತು ಮನವಳುಕುತ್ತ ನೆನೆವುದದನು!
ಪತಿಮುಖದೊಳೀ ಭೀರು ನೇಮವಾಚರಿಸಿಹಳು—
　ಭಾವಕಾತರೆ ಗಿರಿಜೆ ಅಂದೆಂತುಟಂತು.
ನೀ ಕೆಲದೊಳಿಂತಿದ್ದ. ನಾ ಬಿಲ್ಲುಗೊಂಡಿದ್ದೆ ;
　ಆದೊಡಾ ಕತೆ ಬೇರೆ—ಇಂದದಲ್ತು.
ನೀನಿತ್ತ ಮರೆಯೊಳಿರು, ನಾನತ್ತ ತವಸಿಯೆಡೆ
　ಹೊಂಚುತ್ತ ಹಾಡುತ್ತ ಶರವನೊಗೆಯುವೆನು.
ನೀ ನೋಡನೋಡುತಿರೆ, ಮೋಹಾಗ್ನಿ ಭುಗಿಲೆದ್ದು
　ತಪವುರುಹಲೆಂತಹಾ ಮುನಿ ತವಿಪನು!

(ಮದನನು ಮುನಿಯೆಡೆಗೆ ಹೋಗುವನು.)

ಇಂದ್ರ

(ಅಹಲ್ಯೆಯನ್ನು ನೋಡುತ್ತ)

ಅಹ !—
ಎಂಥ ಅಚ್ಚರಿ ಚೆಲುವೆ! ಏಂ ಸುಕೃತಿ ಈ ಅಗ್ನಿ!
ಮೊಗಕೆ ಮಿರುಗಿಡುವೋಲು ಹೊಂಬೆಳಗ ಲೇಪಿಸುತ
　ಸುತ್ತಲೆಡೆಬಿಡದಂತೆ ಕುಣಿದು ನಲಿದಾಡಿ
ಸ್ತುತಿಯ ಪೂಜೆಯ ಕೊಂಬನೀ ಧನ್ಯಪಾವಕನು!
　ನನ್ನ ಮನ ಮತ್ಸರಿಪುದಿದನು ನೋಡಿ.

(ಮದನನು ಗೌತಮನ ಹತ್ತಿರ ಹಾಡುವನು—ಅಲ್ಲಿ ಬೆಳಕು ಬೀಳುವುದು.)

ಮದನ

ಮರುಳ ತವಸಿ ಗೌತಮಾ !
ಇನ್ನಾದರೆಚ್ಚರು !
ನಿನ್ನ ಹೃದಯಧರ್ಮವರಿತು
ಇನ್ನಾದರೆಚ್ಚರು !

ತಪದ ಲೋಭಕಿಂತು ದುಡಿವೆ
ನಿನಗೆ ನೀನೆ ಎರಡ ಬಗೆವೆ ;
ಹುಸಿಯು ಬಾಳನೆನ್ನೆವರಂ
ಬಾಳ್ವೆ ? ನಿನಗೆ ಇದುವೆ ತರಂ ?
ಮರುಳ ಜೋಗಿ ಗೌತಮಾ ! ಇನ್ನಾದರೆಚ್ಚರು !
ನಿನ್ನ ಹೃದಯಧರ್ಮವರಿತು ಇನ್ನಾದರೆಚ್ಚರು !

ಗೋವ ಕಾವ ಗೊಲ್ಲನೆಂತು
ತನ್ನಿರತನಪ್ಪನೆಂತು
ಅಂತೆ ಆಯ್ತು ನಿನ್ನ ಬಾಳು—
ಕರಣಗಳನು ಕಾಯುವಾಳು !
ಅಸ್ವತಂತ್ರ ಗೌತಮಾ ! ಇನ್ನಾದರೆಚ್ಚರು !
ನಿನ್ನ ಹೃದಯಧರ್ಮವರಿತು ಇನ್ನಾದರೆಚ್ಚರು !

ನೇಮವೆಂಬೆ, ನೋಂಪಿ ಎಂಬೆ,
ಇರವ ಪುರುಳ ಹಿಡಿವೆನೆಂಬೆ ;
ನಿಧಿಯನೆಡಹಿ ಮುಂದೆ ನಡೆವ
ಕುರುಡನಂತೆ ಒಲುವೆಬಡವ !
ಪ್ರೇಮಕೃಪಣ ಗೌತಮಾ ! ಇನ್ನಾದರೆಚ್ಚರು !
ನಿನ್ನ ಹೃದಯಧರ್ಮವರಿತು ಇನ್ನಾದರೆಚ್ಚರು !

ಬಾಳ ಕಾಡೊಳೊಲುಮೆಯೊರತೆ
ಹಿಂಗಿಹೋಗಲೆಂಥ ಕೊರತೆ !
ಗೆದ್ದೆನೆಂಬೆ ಕಾವನ—
ಅರಿಯೆ ವಿಫಲ ಜೀವನ !
ಜಂಬಗಾರ ಗೌತಮಾ ! ಇನ್ನಾದರೆಚ್ಚರು !
ನಿನ್ನ ಹೃದಯಧರ್ಮವರಿತು ಇನ್ನಾದರೆಚ್ಚರು :

ಗಂಗೆ ತಡೆವ ರುದ್ರನಂತೆ
ಕಾಲಪೂರದಿದಿರು ನಿಂತೆ !
ಸೆಳೆತವರಿಯೆ, ಅದರ ವೇಗ
ಮುಪ್ಪಿಗೊಯ್ವುದಣ್ಣ ಬೇಗ !
ಪ್ರಕೃತಿಗಿದಿರೆ ಮರುಳ ತವಸಿ ? ಇನ್ನಾದರೆಚ್ಚರು !
ನಿನ್ನ ಹೃದಯಧರ್ಮವರಿತು ಇನ್ನಾದರೆಚ್ಚರು !

(ಅಹಲ್ಯೆ ಪೂಜೆಯನ್ನು ಮುಗಿಸಿ ಗೌತಮನ ಕಡೆಗೆ ಹೋಗುವಳು.)

ಇಂದ್ರ

ಅತ್ತ ಸರಿದಳು, ವಹ್ನಿ ಕುಂಡದೊಳು ಹದುಗುತ್ತ
ಕಳೆಗುಂದಿ ಉತ್ಸಾಹವಡಗುತಿಹನು.
ಗೌತಮನ ಬಲವಂದು ಪೊಡಮಡುವಳೀ ಮಡದಿ ;
ಸ್ಥಾಣುವೇ ಸರಿ ಆತ—ಅಲುಗದಿಹನು !

(ಇಂದ್ರನು ಅಹಲ್ಯೆಯನ್ನೇ ನೋಡುತ್ತಾ ಗೌತಮನ ಒಂದು ಪಾರ್ಶ್ವಕ್ಕೆ ಹೋಗುತ್ತಾನೆ.)

ಅಹಲ್ಯೆ

(ಹಾಡುವಳು)

ಎಸಿತು ದೂರಕೆ ಸರಿದು ನಿಂತಿಹೆಯೋ
ನನ್ನ ಮನದನ್ನ—ಹೇ
ಸತ್ವಸಂಪನ್ನ !

ನನ್ನ ನಿಲುವಿಗೆ ನಿಲುಕದೀ ಪ್ರ
ಬುವಿಯೊಳಡಿಯಿಟ್ಟ ಸುರಸಘನನು
ಮುಟ್ಟೆ, ಮರೆಗೊಂಡಂತೆ ವಾಮನ—
ಎನಿತು ದೂರಕೆ ಸರಿದು ನಿಂತಿಹೆಯೋ
  ನನ್ನ ಮನದನ್ನ—ಹೇ
  ಸತ್ವಸಂಪನ್ನ!

ನಿನ್ನ ತಣಿವಿನ ತಾಣವೆಲ್ಲಿಹುದೋ?
  ಹೇಳು ಲೇಸಾಗಿ—
  ನನ್ನ ಬೈರಾಗಿ!
ಆವ ಆಸೆಯ ಗಂಧ ಸೆಳೆಯಿತು,
ಆವ ಮುದಮಕರಂದ ತಣಿಸಿತು,
ಆವ ಮತ್ತಿಂತಿಹವ ಮರೆಸಿತು?

  ಹೇಳು ಲೇಸಾಗಿ—
  ನನ್ನ ಬೈರಾಗಿ!
ಎನಿತು ದೂರಕೆ ಸರಿದು ನಿಂತಿಹೆಯೋ?
  ನನ್ನ ಮನದನ್ನ—ಹೇ
  ಸತ್ವಸಂಪನ್ನ!

ಎಂಥ ಮರವೆಯೊ ಇನಿಯ ಇಸಿತೊಂದು
  ಹಂಬಲನು ಬಿಟ್ಟೆ—ನನ್ನ
  ಒಂಟಿಯೊಳಗಿಟ್ಟೆ!
ಮನವು ಮುದುಟಿತು ಆಸೆ ನೂರಕೆ,
ಬದುಕು ತೆರವೋ ನೂರು ತನಕಕೆ;
ಏನು ಹೇಳಲಿ ನಿನ್ನ ಸ್ವಾರ್ಥಕೆ!
  ಹಂಬಲನು ಬಿಟ್ಟೆ—ನನ್ನ
  ಒಂಟಿಯೊಳಗಿಟ್ಟೆ!

ಎನಿತು ದೂರಕೆ ಸರಿದು ನಿಂತಿಹೆಯೋ
　ನನ್ನ ಮನದನ್ನ—ಹೇ
　ಸತ್ವಸಂಪನ್ನ !

(ಕಾಮನು ಅಂಬುಹೂಡಿ ಬಿಡುವನು ; ಅದು ಗೌತಮನನ್ನೂ ಗೌತಮನ ಹಿಂದಿರುವ ಇಂದ್ರನನ್ನೂ ಮುಟ್ಟುವುದು. ಗೌತಮನು ಚಲಿಸುವನು-ಕಣ್ತೆರೆದು ಮುಚ್ಚುವನು.)

ಮೈತ್ರೇಯ

(ಅಹಲ್ಯೆಯನ್ನು ಸಮೀಪಿಸಿ)

ಹೊತ್ತು ಮೀರಿತು ನಡೆಯಿರತ್ತಿಗೆ—
ತಪಸಿಗೆಚ್ಚರವಾಗೆ ಮುನಿವರು,
ಮನೆಯೊಳೊಂಟಿಯೊಳಿಹನು ಹಸುಳೆ.
　ಬಿಟ್ಟು ಬಾ ನೀ ಕೌಶಿಕ.

ಅಹಲ್ಯೆ

ಅಂತೆ ಆಗಲಿ ಅಣ್ಣ. ಬಾರಾ
ತಮ್ಮ ಕೌಶಿಕ, ಮುಂದೆ ಅಡಿಯಿಡು—
ಎಂತು ಅಂಜುವುದೆನ್ನ ಈ ಬಗೆ
　ಪತಿಯ ಸನ್ನಿಧಿಯುಳಿಯಲು !
　　(ಹೋಗುವರು)

(ಇಂದ್ರನನ್ನು ಪ್ರತ್ಯೇಕಿಸಿ ಬಳತೆರೆ ಬೀಳುವುದು.)

ಇಂದ್ರ

ಮರೆಯಾದಳು ಬನದೈಸಿರಿ.
ಹಿಂಬಾಲಿಸುತವಳೀಪರಿ　ಅಹಲ್ಯೆಯನ್ನು
ಕಣ್, ತುಯ್ಯುವುದೇನಚ್ಚರಿ—
　ನನ್ನುಳಿವಂತು ?
ಕರಿಮುಗಿಲಿನ ಪಂಜರದೊಳು
ಪರದಾಡುವ ಮಿಂಚಿನವೊಲು

ಹೊಯ್ದಾಡುವುದೆನ್ನೆದೆಯೊಳು
ಆಸೆ—ಅದೆಂತು!

ಎಂದಿಲ್ಲದ ಹೊಸ ರೀತಿಗೆ
ಇಂದಾಯಿತು ನನ್ನೀ ಬಗೆ
ಕಣ್ ರೂಪಿಗೆ ಕಿವಿ ಮಾತಿಗೆ
ನೀರಡಿಸುವ ತೆರದಿ!

ಕುಸುಮೇಷುವು ನನ್ನೆದೆಯನೆ
ಹೊಸ ಚಳಕದೊಳೆಚ್ಚನೊ ಎನೆ
ನೋಟದ ನೆನಪದು ತಿಣ್ಣನೆ
ಮರುಕೊಳಿಪುದು ಮನದಿ.

ಮದನ

(ಹತ್ತಿರ ಬಂದು, ಇಂದ್ರನ ಬೆನ್ನು ತಟ್ಟಿ)
ಬಂದ ಕಜ್ಜವಾಯ್ತು, ಶಕ್ರ, ಬಾನಿಗೇರ್ವ ಬಾ.
ಮನವ ಮುಟ್ಟಿ*ಅಂಬ ಬಿಟ್ಟಿ, ತಪವ ಸುಟ್ಟಿ ಬಾ.

ಇಂದ್ರ

ಏನಾಯ್ತು! ಏನ ಗೈದೆ! ಗುರಿಯು ಮಾತೆ ಕುರುಡಗೆ?
ತಾಕಿತಿಲ್ಲಿ ನೆಟ್ಟಿತಿಲ್ಲಿ, ಸೋತೆನಿಂದು ಚೆಲುವೆಗೆ.

ಮದನ

ಚೆಲುವ ಕಂಡ ಚಣದ ಮೋಹ! ಬಾರ ನಿನ್ನ ಸ್ವರ್ಗಕೆ.
ನಂದನದೊಳು ಅಪ್ಸರೆಯರು ಕಾದಿಹರೋ ಬನದಕೆ.

ಇಂದ್ರ

ನನ್ನ ನಾಚಿಸಂತೆ ನುಡಿವೆ, ಹಳಸು ಬಯಕೆಯಣಕಿಸಿ—
ಅಂಥ ಅಲ್ಪಕಾಮದಿಂದ ನನ್ನ ಮುಕ್ತನಾಗಿಸಿ.

ಮದನ

ಮೂರು ಜಗವೆ ನಿನ್ನದಿರಲು, ನಿನ್ನ ಆಶೆಗೇತಡೆ?
ಇನ್ನು ಬಂದ ಬಳಿಯ ಹಿಡಿದು ನಾನು ಹೋಹೆನತ್ತಡೆ.

ಇಂದ್ರ

ಎಲ್ಲರೊಳಗ ಬಲ್ಲೆ—ನೀನೆ ಇಂತುಟೆನ್ನ ಹಳಿವರೆ?
ಸಮಯಕಪ್ಪ ಕೆಳೆಯನಲಾ ವಿಷಮತೆಯೊಳು ತೊರೆವರೆ?

ಮದನ

ಧರ್ಮಚರಿತನನೆಂತಧರ್ಮಕೆ ಮನವನೀ ಪರಿ ಗೈದೆಯೊ?
ಮುನಿಯ ಸತಿಯನು ಬಯಸುವಾಪದವನೆನಿತು ಎಂಬುದ ಮರೆತೆಯೊ?
ಮೂರು ಲೋಕವನಾಳ್ವ ಘನತೆಯ ಗಳಿಗೆಬಯಕೆಗೆ ನೀಗಲು,
ಎಂತು ನೀನಿಂದಾದೆ ಶಕ್ರ, ಇಂತು ಮೋಹಕೆ ಮೀಸಲು!

ಇಂದ್ರ

ಗುರುಗಳೊರೆವಂತೊರೆವೆ, ಮನ್ಮಥ, ಸಾಕು ನಿನ್ನುಪದೇಶವು.
ಅಂತರಂಗವ ಬಲ್ಲೆ, ನನ್ನೊಳೆ ಏತಕೀ ಪರಿಹಾಸ್ಯವು?
ನೂರು ಹೆಂಗಳ ಕಂಡೆನಾರಿಗೆ ಹೃದಯವೀತೆರ ತೆರೆಯಿತು?
ಇಂದದೇತಕೆ ಇವಳ ಚೆಲ್ವಿಕೆ ನನ್ನನೀ ಪರಿ ಸೆಳೆಯಿತು?

ಧರ್ಮಕರ್ಮದ ಮಾತ ತೆಗೆ ತೆಗೆ! ಇವನು ಅರಿತವರೇಕಿದು?
ಸ್ವಪದಾಪದವೆಂಬ ತರ್ಕವ ಜಡೆಲೊ ಒಲಿದವನೇಕದು?
ಒಳಗಿನೊಳಗನು ಕಂಡು ನಡೆವುದು ತಾನೆ ಧರ್ಮದ ಮರ್ಮವು;
ನರನ ಬೆದರಿಕೆಗಾನು ಭಯಗೊಳೆ ಅದುವೆ ದೇವರ ಧರ್ಮವು?

ಹಲವು ಮಾತಿಂದೇನು, ಮದನ, ಒಲಿದೆನೆಂದೊಡೆ ಸಾಲದೆ?
ಮಧುವಿನಂತಃಸ್ಫೂರ್ತಿಗೊಲವೇ, ಶಿಶಿರಸಂಯಮ ಸೋಲದೆ?
ದಿನದ ಬಾಳ್ವೆಯ ರೂಢಿ ಮುಚ್ಚಿದ್ದೊಳಗಿನಾಳದ ಅರಕೆಯ
ಹೆಣ್ಣ ಬೆಳಕಿಂ ಕಂಡು ಬೆದರಿಹೆ: ಪೂರ್ಣಗೊಳಿಸೀ ಬಯಕೆಯ.

ಸ್ವರ್ಗದೊಡೆತನವುಳಿಯಲಳಿಯಲಿ, ನನ್ನ ಸಂಪದವೆಲ್ಲವೂ
ಸೂರೆಯಾಗುತ ಹೋಗಲೊಲವೇ, ನನಗೆ ಹಂಬಲವಿಲ್ಲವು!
ಸಕಲಹೃದಯದ ಸೂತ್ರಧಾರನೆ ಸತಿಯನೆನ್ನವಳೆನ್ನಿಸೈ.
ಸೋಲನರಿಯದ ಮಿತ್ರ ಮನಸಿಜ, ನನ್ನ ಹರಕೆಯ ಸಲ್ಲಿಸೈ.

ಮದನ

(ಬೆರಗಾಗಿ, ತನ್ನಲ್ಲಿ ತಾನೆ)

ತಾಪಸಗೆ ಸತಿಮೋಹ—ಸತಿಗೆ ವಿಭವದ ಮೋಹ
ಸಕಲವಿಭವೇಶ್ವರನೊ—ರೂಪಕಾಮು!
ಅರೆಯೊಣಗಿದಿಂಧನದಿ ಇಂತೆ ಹೊಗೆವುದು ಬೆಂಕಿ
ತನ್ನ ನಿಜ ತಾನಡೆವ ಮುನ್ನ; ವಿಧಿನೇಮ!

(ಇಂದ್ರನಿಗೆ)

ನಿನ್ನ ಈ ಬಗೆ ಕಂಡು ಕನಿಕರಿಪೆ ನಾ ಶಕ್ರ,
ಮುನಿಗು ಮಡದಿಗು ಇಂತೆ ಮರುಗುತಿಹೆನು.
ಅವರವರ ಪ್ರಕೃತಿಯೊಲು ನಡೆಯಲೆಲ್ಲರು ಇಂದು
ಇನಿತಡ್ಡಿಯಿಲ್ಲದಲೆ—ಇಂತೆಸಪೆನು.
ಇಂತೆಸಗಲೆನ್ನೆಸಕ ತೀರಿತಿಲ್ಲಿಂದು—
ಪ್ರೇರಣೆಯನರಿತು ನಡೆ ಎಚ್ಚರದಿ ಬಂಧು!

(ಮದನನು ಅಂತರ್ಹಿತನಾಗುವನು.)

ಇಂದ್ರ

ಅಹ!—

ಎಂತಹ ವರವಿತ್ತೆಯೊ ಕಂತು—
ನನ್ನ ಪ್ರಕೃತಿಯ ಪ್ರೇರಣೆಯೆಂತು!
ಏನು ಮಾಯೆಯೋ ನಿನ್ನದು, ಒಲವೆ

ಏನು ಶಕ್ತನೋ ನೀನೆನ್ನೊಲವೆ!
ಸ್ವರ್ಗಭೋಗತ್ರೈಲೋಕ್ಯವೈಭವಂ
ಭ್ರಾಂತಿ ಎನಿಪುದೀ ಮೋದಕ್ಕೆತವಂ.
ಆಕರ್ಷಿತ ಉಡು ಪಥವಳಿವಂತೆ
ಧಾವಿಸುತಿದೆ ನನ್ನಿರವೊಲವಂತೆ.
ಕೊಳ್ ಎಂಬುದು ನನ್ನಂತಃಸ್ಫೂರ್ತಿ,
ಕೊಡು ಎಂಬುದು ನನ್ನೊಳಗಿನ ಅರ್ತಿ;
ಹುಸಿ ಹುಸಿ ಮಿಕ್ಕಿನ ರಾಗವಿದೆಲ್ಲಾ
ಅವಳ ಪಡೆವ ಸೈಪೇ ನನ್ನಿಯಲಾ!

(ಆಲಿಸಿ ನೋಡಿ)

ಶರಣೆಂದೆರೆಯುತ ಕರೆವಳು ಚೆಲುವೆ.
ಅವಳ ಸಂತವಿಸೆ ನಾನೀ ಚಣವೆ
ಪೋಪೆನಿದೋ—ನನ್ನೊಲವನರ್ಚಿಸೆ
ಈ ಆರಾಧನೆಗೆನ್ನನರ್ಪಿಸೆ.
ಮಧು ಒದಗಲಿ, ಚೆಲುವಾಗಲಿ ಬನವು,
ತಣ್ಣೆಲರೊಳು ತೇಲಲಿ ಸೌರಭವು,
ಓಸರಿಸಲಿ ಕಾರ್ಮೋಡದ ತೆರೆಯು,
ಜೊನ್ನದ ಸೊದೆಯನು ಕರೆಯಲಿ ಪೆರೆಯು.
ಇಂದು ಮಹೇಂದ್ರಂಗಪ್ಪ ನಲ್ಮೆಗೆ
ಜಗವೆ ನಗಲಿ ನನಗಪ್ಪ ಸಲ್ಮೆಗೆ!

(ಹೋಗುವನು.)

ತೆರೆ

12-12-15

## ದೃಶ್ಯ ೫

(ಅದೇ ಸ್ಥಾನ. ಅಗ್ನಿಯ ಪತ್ತಿರವಿರುವ ಮೈತ್ರೇಯನನ್ನು ತೋರಿ ತೆರೆಯೇಳುವುದು. ತೆರೆ ಎದ್ದ ವೇಳೆಯಲ್ಲಿಯೇ ವಟು ಕೌಶಿಕನು ಪ್ರವೇಶಿಸುವನು.)

ಮೈತ್ರೇಯ

ಸತಿ ಅಹಲ್ಯೆಯ ಹದುಳದಿಂದಲಿ
ಪರ್ಣಶಾಲೆಯನೈದಿಸಿ
ಬಂದೆಯಾ? ತಡವಾಯ್ತು—ದಿಟವಾ-
ಗೇನು ಭೀಕರೆ ತಾಮಸಿ!

ಕೌಶಿಕ

ನಿಮ್ಮನುಗ್ರಹ ಕಾಪಿಗಾಯಿತು.
ಎಡರ ಕಾಣದೆ ಮರಳಿದೆ.
ಸತಿಗೆ ಶಕ್ರನ ಭೀತಿ ತಣಿಯಲು
ಅವನ ಪೂಜೆಯ ಬೆಳಸಿದೆ.

ಮೈತ್ರೇಯ

ಒಳ್ಳಿತೆಸಗಿದೆ ತಮ್ಮ, ಕೌಶಿಕ,—
ನಾವು ಹಗೆದಿಲ್ಲಿಂದ್ರಗೆ.
ಏನು ವಿಲಯದ ನಿಶಿಯೊ ಇದುವು;
ಏನು ಹೇಳಲಿ ಗಾಳಿಗೆ!
ತಿರೆಯುನದುಮುತ ನೇಲಕೆದ್ದೊಲು
ಬಾನ ಬಟ್ಟೆಗೆ ಚಿಮ್ಮುತ
ಮುಗಿಲನೆಲ್ಲವ ಗುಡಿಸಿ ಬಿಸುಡುವ
ತೆರದಿ ಬಹನೀ ಮಾರುತ!

ಕೌಶಿಕ

ಏನಿದಚ್ಚರಿ! ಸೊಲ್ಲನುಡುಗುತ
ಮೂಲೆಗಾಯಿತು ನೋಡವು!
ಬಾನು ತಿಳಿಯಿತು—ಚುಕ್ಕಿ ಮೂಡಿತು,
ಸಿಗ್ಗನುಳಿಯಿತು ಕಾಳವು!

ಮೈತ್ರೇಯ

ಏನು ಬೆರಗಿದು! ತೆಂಕಣತ್ತಣಿ-
ನೆಂತು ಮೆಲ್ಲನೆ ನೋದದಿ
ಬರುತಿಹುದು ಈ ಗಾಳಿ—ವಿಜಯಕೆ
ಸಂದ ಕೆಂಪಿನ ಮಾನದಿ!

ಜಗವನೆಲ್ಲವ ನುಂಗಿ ಶಾಂತಿಯ-
ನಾಳ್ವ ಹೆಗ್ಗಡಲೇನಿದು—
ಅಳಿದ ತೀರದ, ನೊರೆವ ತಾರೆಯ
ತುಂಬುತನುವೆನಗೆನಿಪುದು!

ಕೌಶಿಕ

ಅದೆಕೊ ಗುರಗಳೆ! ಬುವಿಗು ಬಾನಿಗು
ಎಳೆಯುತೆಲ್ಲೆಯ ಗೆರೆಯನು
ಇರುಳ ಪಾಚೆಯ ಸುತ್ತಲೊತ್ತರಿ-
ಸುತ್ತ ಬಹ ಕೆಂಬೆಳಗನು!

ಮೈತ್ರೇಯ

ಅಹುದು, ಕೌಶಿಕ, ಮೂಡುತಿರುವನು
ಚಂದ್ರನಹ, ಸೋಜಿಗದೊಳು—
ಸುತ್ತನುಳಿಯುತ ಕಣ್ಣ ತೆರೆದಳು
ಈಗಳೆಂದೆನೆ ಕತ್ತಲು!

ಕೌಶಿಕ

ಕಲೆಯ ಬಲ್ಲ ಕುಲಾಲ ಮೂಡಿಪ
ಮಾಟದೊಲು ಮೃತ್ತಿಕೆಯೊಳು—
ತಿರುಗಿ ಜಗವೆಂತಾಗುತಿರುವುದು
ಪೆರೆಯ ಕಲೆಯಿಂ ತಮದೊಳು!

ಇತ್ತ ಒತ್ತಿದ: ಕೆರೆಗಳಾದುವು!
ಅತ್ತ ಎತ್ತಿದ: ಗಿರಿಗಳು!—
ಅಲ್ಲಿ ನೀಲಿಮಲೇಖೆ ರಚಿಸಿತು
ಬನದ ಮೊತ್ತವ ಚಣದೊಳು!

ಮೈತ್ರೇಯ

ಮುಟ್ಟಿದೆಡೆ ರೂಪಾಯ್ತು ಬಯಲೊಳು—
ಎಂಥ ಶಿಲ್ಪಿಯೊ ಸೌಮ್ಯನು!
ಕಲ್ಪದಾದಿಯೊಳಿಂತೆ ಜಗವನು
ರಚಿಪ ಬಿದಿಯೊಲು ಕಾಂಬನು.

ಕೌಶಿಕ

ಎಂಥ ಮಾಯೆಯ ಇರುಳು, ಗುರುಗಳೆ!
ಚಣಕು ಬಗೆಬಗೆಯಪ್ಪುದು—
ಇಂಥದಪ್ಪುದು, ಇಂಥದಾಗದು
ಎನ್ನಲಾಗದ ತೆರನಿದು!

(ದೂರದಲ್ಲಿ ಗೌತಮನು 'ಮಿತ್ರ, ಮೈತ್ರೇಯಾ!' ಎಂದು ಕರೆಯುವನು.)

ಮೈತ್ರೇಯ

ಆರು ಕರೆವರು ಇಂತು ನನ್ನನು?

ಕೌಶಿಕ

ಆರ್ಯ, ಗುರುಗಳ ಕೊರಲಿದು.

ಗೌತಮ

ಮೈತ್ರೇಯಾ ?

ಮೈತ್ರೇಯ

ಅಹುದು, ಗೌತಮ ಕರೆವನಾತನು
ಸೋಜಿಗವೆ ಎಚ್ಚತ್ತುದು !

(ಕೌಶಿಕನು ಕತ್ತಲಲ್ಲಿರುವನು ; ಮೈತ್ರೇಯನು ಗೌತಮನ ಹತ್ತಿರ ಹೋಗುವನು.)

ಮೈತ್ರೇಯ

ಎಚ್ಚರಾಯಿತೆ ಅಣ್ಣ ? ಗೌತಮಾ ಕರೆದೆಯಾ ?

ಗೌತಮ

ನೀನಿದಕೆ ಸೋಜಿಗಂಗೊಂಡಿರುವೆ, ಮೈತ್ರೇಯ ?

ಮೈತ್ರೇಯ

ಸೋಜಿಗವೆ ಸಾಜವೆಂದೆನಿಸುವುದು ಈ ರಾತ್ರಿ.
ಎಂದಿನಂತಿಲ್ಲಣ್ಣ ಈ ಇರುಳೊಳೀ ಧಾತ್ರಿ !

ಗೌತಮ

ಎಂದಿನಂತಿಲ್ಲ ದಿಟ ಈ ಇರುಳೊಳಾವುದೂ.—
ನಿಯಮಶುಷ್ಕೆ ರಸರಹಿತೆ ಯಾಮಿನೀ
ಆರ್ದ್ರಳಾದಳಿಂದಿಂದುಕಾಮಿನೀ.
ಪ್ರಳಯಶಕ್ತನುನ್ಮತ್ತ ಮಾರುತಂ
ಮೆತ್ತಗಾದನುಲ್ಲಸನ ಬೀರುತಂ.
ಬಾನ ಬಗೆ ಇಂದು ರೌದ್ರಭಾವವಂ
ಬಿಟ್ಟು ಹಸನಾಯ್ತು ಮರೆದು ಹೇವವಂ.

ಸಹಜ ಧೀರತೆಯನುಳಿದು ಮನ್ಮನಂ
ನೆರವನಾಶಿಸುತ ಆಯಿತುನ್ಮನಂ.

ಮೈತ್ರೇಯ

ನಮ್ಮ ತಪವನು ಕೆಡಿಸೆ ಸುರರು ಹೂಡಿದ ಹೊಟ—
ಇಂತಿಲ್ಲದಿನ್ನಿಲ್ಲ—ಬಲ್ಲೆ ನಾನವರಾಟ.

ಗೌತಮ

ಕಣ್ಣ ಮುಚ್ಚೆ ರೂಪವೊಂದು
ಕಣ್ಣ ಮುಂದೆ ಕುಣಿವುದು;
ಕಿವಿಯ ಮುಚ್ಚೆ ಕೊರಲದೊಂದು
ಧ್ಯಾನವನ್ನು ಮುರಿವುದು.
ಚಪಲ ಮನವೊ ಬಳಿಗೆ ಬರದು
ಎದೆಯನೆತ್ತೊ ತುಯ್ವುದು;
'ಮರುಳ ನೀ ಮರುಳ' ಎಂದು
ಏನೊ ಮರೆಗೆ ನಗುವುದು.

ಮೈತ್ರೇಯ

ಮಾರನದೆ ಈ ಮಾಟ, ಸಂದೇಹವಿನಿತಿಲ್ಲ;
ನಿನ್ನ ಮನವನು ಕದಿಯೆ ಹೊಂಚಿಹನು ಆ ಕಳ್ಳ.

ಗೌತಮ

ಮರುಳಮುನಿ ಹುಸಿಜೋಗಿ ಜಂಭದವ ನೀನೆಂದು
ಒಲವೊರತೆ ಹಿಂಗಿಸಿದೆ, ಬದುಕರೂಪಾಯ್ತೆಂದು
ದನಿ ಮೊಳಗಿತೆನ್ನೊಳಗೆ, ಎಚ್ಚರೆಚ್ಚರು ಎಂದು.
ಮನಸಿಜನ ಮಾಯೆ ಇದು, ಇದ ಗೆಲ್ಲಬೇಕೆಂದು
ಮೊದಮೊದಲು ನಾನಿಂತೆ ಬಗೆದು ಬಗೆಯನು ತಡೆದೆ.
ಕೊನೆಗೆ ಕಡುಕಷ್ಟದೊಳು ಧ್ಯಾನದಾಳಕೆ ನಡೆದೆ.

ತುಸ ಕಾಲವಿಂತಿರಲು, ಸನ್ನಿರವಿನಬುಧಿಯೊಳು
ಮಥಿತವಾಯಿತು ಶಾಂತಿ ಮೃದುಮಧುರಗೀತದೊಳು.
ಸುಳಿಗೆ ಸಿಕ್ಕಿದ ತೆರದೊಳೆಚ್ಚರಕೆ ನಾನೆದ್ದೆ,
ಅಚ್ಚರಚ್ಚರಿಗೊಂಡು ಆ ಹಾಡನಾಲಿಸಿದೆ.
ಎಂದೊ ಕೇಳಿದ ಕೊರಲು—ಪರಿಚಿತಾಪರಿಚಿತಂ
ಮನ್ಮಾನಸಗ್ರಾಹಿ ಉನ್ಮದ ಮುದಾಂಚಿತಂ !
ಆಗ ಹೊಳೆಯಿತು ಮಿಂಚು—ಕಂಡೆ ನಾ ಕಣಸೊಂದ ;
ಕಂಡ ಚಣವೇ ಕುಸಿಯಿತೆನ್ನ ಧೃತಿಯುಳಿವಂದ !
ದಿವ್ಯರೂಪದ ಹೆಣ್ಣು ! ಎಂತು ನಾನದ ಮರೆವೆ ?
ಅಹಲ್ಯೆ—ನನ್ನ ನಚ್ಚಿನ ಮಡದಿ—ಆ ಚೆಲುವೆ !
ನೂರು ಹೆಂಗಳ ಜರೆದು ಆರಿಸಿದೆನಿವಳೋವಿ
ಈ ತಿರೆಯೊಳೀ ಬಾಳ ನಡೆಸಲೆಂದೀ ದೇವಿ.
ರೂಢಿಯೊಳು ಮರೆತೆ !—ಬಾಳ ಹಿನ್ನೆಲೆಗಿಟ್ಟೆ,
ನನ್ನ ಧರ್ಮದ ಗುಡಿಯ ಬೆಳಕಿಗೀ ಮುಸುಕಿಟ್ಟೆ.
ತಪವೆಂದೆ ಜಪವೆಂದೆ, ರಾಗವನು ಹಿಂಗಿಸಿದೆ ;
ಒಲಿದಗೊಲವೊಳೆ ಮುಕ್ತಿ ಎಂಬುದರಿಯದೆ ಹೋದೆ !
ಎನಿತು ಕೊರಗೊಳು ನಿಂದಳೀ ಚೆಲುವೆ ನನ್ನಿದಿರು ;
ಎನಿತು ದೈನ್ಯದೊಳೆರೆದಳಿನ್ನಿನಿಯ ಅಗಲದಿರು !
ಅಪ್ಸರೆಯ ಹಿಂಚಿಸುವ ಈ ರೂಪು ಈ ಕೊರಲು ;
ಧರ್ಮದೊಳೆ ಎನಗಾದ ಹೆಣ್ಣಿವಳು ನನ್ನವಳು !
ಆಗರಿತೆನಾ ಸೊಲ್ಲ ಸ್ಮರನ ಸಂಚಲ್ಲೆಂದು
ನನ್ನೊಳಗೆ ನುಡಿಯುತಿಹ ಹುರುಳ ನುಡಿ ಇಂತೆಂದು
ತಪವ ಗಳಿಸುವ ಲೋಭವೀ ದನಿಯ ಮರೆಸಿತ್ತು,
ಇಂದುವರೆಗೆನ್ನಸುವು ಕಾಳದೊಳು ಮುಳುಗಿತ್ತು.
ಈಗೆನಗೆ ಬೆಳಗಾಯ್ತು, ಕಾಳ ಕಾಲ್ಗೆಟ್ಟಿತು.
ಇಂದು ಈ ದರ್ಶನದಿ ನೋಂಪಿ ಕೊನೆಗಂಡಿತು.
ಬಾ, ಪ್ರೋಷ, ಮೈತ್ರೇಯ, ಒಲವನನುಸರಿಸಿ ;

ಒಂಟಿಯೊಳು ಕಂಗೆಟ್ಟು ಇರುವಳೆನ್ನರಸಿ.

ಮೈತ್ರೇಯ

ಕಂಡೆಯಾ ನೀನವಳ, ಕೇಳಿದೆಯ ಆ ಕೊರಲ?

ಗೌತಮ

ಕಂಡೆನಾ ಸುಂದರಿಯು, ಕೇಳಿದೆನು ಆ ಕೊರಲ;
ಅರಿತೆ ನಾನೀ ಜಗವ ನಡೆಸುತ್ತಿರುವೊಂದು ಪುರುಳ.
ಇದಕಾಗಿಯೋ ಹೊನಲು ಕಡಲ ಕುರಿತೋಡುವುದು
ಇದಕಾಗಿಯೋ ಹಳುವ ಪೂತು ಫಲಿಸುವುದು.
ಇದಕಾಗಿಯೋ ಜೀವ ಬೇರೊಂದನರಸುವುದು
ಇದಕಾಗಿಯೋ ದೇವ ಸಂಸಾರಿಯಹುದು.
ಬಾ, ಮಿತ್ರ ಮೈತ್ರೇಯ, ಮನೆಯ ಬಳಿವಿಡಿದು ;
ಸ್ನೇಹವೆನ್ನೆದೆಯತ್ತ ತುಯ್ಯುತಿಹುದು.

ಮೈತ್ರೇಯ

ಇನ್ನೆರಡು ದಿನ ತಡೆಯೆ, ಸಿದ್ಧಿಸುವುದೀ ಸಿದ್ಧಿ.
ಆಗ ಬೊಮ್ಮನ ಮಿಗುವೆ—ವಶವ ಗೈ ಈ ಬುದ್ಧಿ.

ಗೌತಮ

ಮೂಜಗವನೆ ರಚಿಸಬಲ್ಲ
ತಪದ ಶಕ್ತಿ ಇಹುದೆನ್ನೊಳು.
ನೂರಾಸೆಗೀಡಾಗಿ
ಸುಯ್ಯುತಿಹಳು ಎನ್ನವಳು,
ಲೋಭಕುಂಟು ಪರಿಮಿತಿ
ಬಳಿಕ ತ್ಯಾಗ ಪ್ರೇಮಮಿತಿ.
ಹಲವು ಮಾತೇಕೆ ಕೆಳೆಯ—
ಪ್ರೇಮತಂತುಬದ್ಧ ಹೃದಯನಾದೆ—ಬಾ, ಬಾ,

ಲೋಭಮುಕ್ತ ತ್ಯಾಗಸಕ್ತ
ಇಂದು ನಾ ಪ್ರಿಯಾನುರಕ್ತನಾದೆ—ಬಾ, ಬಾ.
ಕೌಶಿಕಮುನಿ ಮೇನಕೆಯನು
ಒಲಿಸಿದ ತೆರನೆನ್ನೊಲವನು
ಎಲ್ಲ ಆಸೆ ಹಿಂಗುವಂತೆ
ಒಲಿಸಲಾದೆ ನಾನಿದಿಂತೆ.
ತಪದ ರಾಶಿ ವೆಚ್ಚವಾಗಲಿಂದು ಮೋದಕೆ!
ಹೊನ್ನ ಮಾಡ ಹೂದೋಟವೆಮ್ಮ ಭೋಗಕೆ!
ಧನವ ಸ್ಥೈ ಎನ್ನಲಿಂದು ನಮ್ಮ ತ್ಯಾಗಕೆ!
ಮದನ ಮೂಗುಮುಟ್ಟಿಕೊಳಲಿ ನಮ್ಮ ರಾಗಕೆ!
ಸತಿಯೊಲಿಪೆನು ಇಂದ್ರಾಣಿಯ
ಇಂದ್ರನಂದದಿ—
ಇಂಥ ಜೋಡಿ ಇನ್ನಿಲ್ಲ
ಎನ್ನುವಂದದಿ.

(ಹೋಗುವನು)

ಮೈತ್ರೇಯ

ಮದನನ ಗೆದ್ದವರುಂಟೇ ಜಗದಿ?
ತನ್ನ ಪತಾಕೆಯ ಈ ಮುನಿಮನದಿ
ನೆಟ್ಟನಲಾ ಈ ಮಡದಿಯ ನೆವದಿ.
ಮಾಟವ ಇರುಳಿದು, ಏತಕೊ ಭಯದಿ
ಶಂಕಿಪುದೆನ್ನೆದೆ ಮೋಸವಿದೆನಿಸಿ.
ಕೌಶಿಕ, ಬಾರಾ, ಸಖನನುಸರಿಸಿ
ಪೋಗುವ ಪಾವಕನಂ ನಮಿಸಿ
ಮಂಗಳವನು ಹರಸಿ

ತೆರೆ

## ದೃಶ್ಯ ೬

(ಪರ್ಣಶಾಲೆಯಲ್ಲಿ ಅಹಲ್ಯೆ ಹಸುಳೆಯ ತಲೆಯನ್ನು ತೊಡೆಯಮೇಲಿಟ್ಟು ಮಲಗಿಸಿಕೊಂಡು ನುಡಿದಾಡುತ್ತಿರುವಳು.)

ಮಗು

ಇಂದು ಬಂದಿದ್ದರೇ ನಮ್ಮಯ್ಯನೆಡೆಗೆ
ನೀನೊರೆದ ದೇವತೆಗಳೀ ನಾಡ ಕಡೆಗೆ?
ನನಗೆ ಭಯವಾಯ್ತಮ್ಮ ನಿನ್ನ ಕಾಣದೆಯೆ;
ನನ್ನನೂ ಜೊತೆಗೊಯ್ಯೆ ನಾಳೆ ತಪ್ಪದೆಯೆ.

ಅಹಲ್ಯೆ

ಅಂತಾಗಲೆನ್ನಯ್ಯ ಕರೆದೊಯ್ವೆ ನಾಳೆ,
ಇಂದು ಮಲಗೆಲೆ ಕಂದ ಹಾಸಿಗೆಯ ಮೇಲೆ.

ಮಗು

ಅಮ್ಮ ನೀನೆನಗೊಂದು ಸವಿಯ ಕತೆ ಹೇಳೆ—
ಅಪ್ಸರೆಯರಿರುತಿರುವ ನಾಡ ಕತೆ ಹೇಳೆ.

ಅಹಲ್ಯೆ

ಎಂತೊರೆಯಲಣ್ಣಯ್ಯ ಆ ನಾಡ ಕತೆಯ
ಎಲ್ಲ ಲೋಗರ ಕನಸ ಲೋಕದಚ್ಚರಿಯ?
ಅಲ್ಲಿ ಇರುಳೇ ಇಲ್ಲ ನಮ್ಮನಂಜಿಸಲು
ಬೇಕಾದುದೆಲ್ಲವಿದೆ ನಮ್ಮ ನಂಬಿಸಲು.

ಮಗು

ಹುಲ್ಲೆ ಕರುವಲ್ಲಿಹುದೆ, ಕರಿಗಣಿಕೆ ಹಣ್ಣು
ರಸಬಾಳೆ ದಾಳಿಂಬೆ ಚಕ್ಕೋತ ಹಣ್ಣು?

ಅಹಲ್ಯೆ

ಇಷ್ಟೆ ಸಾಕೇ ಕಂದ, ಸಾಕೆ ನಿನಗಿನಿಸು ?
ಬೇಕಾದ ಹಣ್ಣಿಹುದೊ ಅಲ್ಲಿ ದಿನದಿನಸು !

ಮಗು

ಆಮೇಲೆ ?—

ಅಹಲ್ಯೆ

ಕುಡಿಯುಲಮೃತವು ಅಲ್ಲಿ—ಗವರಿಪರ ಕಾಟ
ಇಲ್ಲದಾಡಲು ಇಹುದು ನಂದನದ ತೋಟ.
ನಗುನಗುವ ಜನವಲ್ಲಿ—ಅಳುವ ಸೊಲ್ಲಿಲ್ಲ—
ಬಯಸಿದೊಡೆ ದೊರಕುವುದು ಬೇಡಿದಸಿತೆಲ್ಲಾ.
ದಿವವೆಂಬರಾ ನಾಡ ;—ಇಂದ್ರನೆಂಬರಸು
ವೈಭವದೊಳಾಳುತಿಹನಿಂದ್ರಾಣಿವೆರಸು.
ಅವಳ ಪುಣ್ಯವೆ ಪುಣ್ಯ—ಮೂಜಗದ ಕನಸು
ಆಯಿತಾ ಭಾಗ್ಯವತಿಗಿರವಿನೊಳೆ ನನಸು !
ಮಳೆರಾಯನೆನ್ನುವರು, ಬೆಳೆರಾಯುನವನು,
ತಿರೆಯೆಲ್ಲವಾತನೇ ಪೊರೆಯುತಿರುವವನು.
ಕಂದಮ್ಮ........

ನಿದ್ದಿಸಿದನೀ ಮುದ್ದನೇನಾಯೆಗಾಯ್ತಮ್ಮ
ಈ ನಾಡು ? ನಾ ಬಗೆದ ಕನಸೆ ಮೂಡಿ
ಬಂದ ತೆರನೀ ಜೊನ್ನ ಈ ಗಾಳಿ ಈ ಕಂಪು
ಎನಗೆನಿಪುದಿಳೆಯಿಂದು ದಿವಕೆ ಜೋಡಿ.
ರೆಕ್ಕೆಗೊಂಡೇರಿತೇ ಪುಷ್ಪಕದ ತೆರದಿ
ಕರಿಮುಗಿಲ ಮೇರೆಯುಳಿದೀ ನಾಡು ಭರದಿ ?
ಇಂತಹುದು ಕನಸಿನೊಳು—ನನಸಲ್ಲವಿದುವು ;
ಹಗುರವಾಗುಲ್ಲಸಕೆ ತವರಾಯಿತಿರವು.

ಅಲ್ಲಗೋ ದೂರದೊಳು ಕಾಣುವಚ್ಚರಿ ಏನು ?
ಆರ ಮೂರ್ತಿಯುದಪ್ಪ, ಒರುವರಾರಿಂತು ?
ಇಚ್ಛೆ ಕೈಗೂಡಿತೇ ಪತಿದೇವ ಬರುತಿಹರೆ
ತಪದ ಸಿದ್ಧಿಯ ಪಡೆದು ದಿವ್ಯತೆಯನಾಂತು ?
ಧೀರಗತಿ, ನೆಲಸೋಕಿ ಸೋಕದೊಲು ನಡೆ ಹಗುರ,
ಪರಿವೇಷಗೊಂಡಿರುವ ಸೌಮ್ಯತೇಜ !
ತಿರೆ ನಡೆವ ಸುರನಂತೆ ಹೊಸ ತೆರದಿ ಬರುವಿವರ
ಕಂಡು ಬೆಚ್ಚರಿಸುವುದು ಮನಕೆ ಸಾಜ.
ಧಿಕ್, ನನ್ನ ಅಲಸತೆಗೆ, ಬಗೆಯ ಕಳವಳಕೆ !
ಅಣಿಗೈಯದಿಂತಿಹೆನೆ ಪತಿಯ ಸ್ವಾಗತಕೆ !

(ಒಳಕ್ಕೆ ಹೋಗಿ ಅರ್ಘ್ಯಪಾದ್ಯಗಳನ್ನು ಅಣಿಮಾಡುವಳು.)

ಇಂದ್ರ

(ಗೌತಮವೇಷದಿಂದ ಪ್ರವೇಶಿಸಿ)

ಸತಿ ಮೊದಲೆ ಬೆಚ್ಚದೊಲು ಪತಿರೂಪವಾಂತೆ ;
ದಿಟಪರಿಯಲೇನೆಸಪಳೋ ಕಾಣೆ ಕಾಂತೆ.
ಗೌತಮನ ಮನೆ ಎನ್ನ ಕಪಟದೊಳಹೊಕ್ಕು
ಕಂಡಿತೆನೆ, ಭಯ ಮಿಗುವುದೆನ್ನುಲ್ಲಸಕ್ಕೊ.

ಅಹಲ್ಯೆ

(ಅರ್ಘ್ಯಪಾದ್ಯದೊಡನೆ ಪ್ರವೇಶಿಸಿ)

ಸ್ವಾಗತವೆ, ನನ್ನಿನಿಯ, ನೋಂಪಿ ಕೊನೆಗಂಡಿತೇ
ಮನೆಯಾಸೆ ಮರಳಿತೇ, ನನ್ನಾಸೆ ಫಲಿಸಿತೇನು ?
ಈ ನಲವು ನನ್ನಿಯೋ ? ಚಿತ್ತದುದ್ಭ್ರಾಂತಿಯೋ ?
ಏ ಮಾಯೆ ಇರುಳಿದುವು ; ಬಗೆದುದನುವಪ್ಪುದೇನು !

ಇಂದ್ರ

ನಾ ಬಂದುದಚ್ಚರಿಯೆ, ಪ್ರಿಯೆ, ಇಲ್ಲಿ ಬೆರಗೇನು?
ನನ್ನೊಳಗನಿಂದರಿತೆ, ಏನೇಳ್ವೆನದ ನಾನು?
ಪೆರೆಗಣ್ಣ ನಿಶೆ ತೆರೆದಳರಳರಳಿ ಕಂಪಾಯ್ತು,
ತಂಗಾಳಿ ಮೈಮೇಲೆ ತಣುವಾಗಿ ಹರಿಯಿತ್ತು.
ಅಪ್ಸರೆಯ ಗೀತಕೂ ಇನಿದಾದ ಹಾಡೊಂದು
ಧ್ಯಾನದಾಳದೊಳಿದ್ದ ಮನಕೆ ಎಚ್ಚರ ತಂದು,
ಇಂತೆಂದಿತೆಲೆ ಮರುಳೆ, ನಿನ್ನಿನಿಯಳಿಂದೊಂಟಿ,
ಇಂದಿಂತು ಅಗಲುವರೆ?—ಎನಲೆದ್ದೆ, ಕಲಕಂಠಿ.
ಈ ಚೆಲುವಿನಿರುಳಿನೊಳು, ಬಾ, ಒಲವನರ್ಚಿಸುವ,
ಬಾ, ಇಂದು ಸಮ್ಮುದಕೆ ತನುಮನವನೊಪ್ಪಿಸುವ!

ಅಹಲ್ಯೆ

ಎಂದುಮಿಲ್ಲದ ರೀತಿ, ಎಂದುಮಿಲ್ಲದ ಮಾತು!
ನಂಬಲೇ, ಬಂದನೆನೆ ನನ್ನಿನಿಯ ನನಗೋತು?

ಇಂದ್ರ

ನಿನ್ನಿನಿಯ ನಾನ್ನೈಸೆ—ಇಲ್ಲಿ ಸಂದೆಗವೇಕೆ?
ಪೂರ್ಣೇಂದುವದನೆ ಬಾ, ಸಲಿಸೆನ್ನ ಹಾರೈಕೆ.

(ಮುಂದೆ ಮುಟ್ಟಹೋಗುವನು.)

ಅಹಲ್ಯೆ

(ದಿಟ್ಟಿಸಿ ನೋಡಿ ಬೆಚ್ಚಿ ಹಿಮ್ಮೆಟ್ಟಿ)

ಹುಹು ಅಲ್ಲ, ಅಬ್ಬಯ್ಯ! ಏಗೈವೆ, ಪತಿಯಲ್ಲ—
ಪತಿವೇಷವಾಂತಿರುವ ಮಾಯಾವಿ ಈ ಹೊಲ್ಲ!

ಇಂದ್ರ

(ಸ್ವರೂಪವಾಂತು)

ಬೆದರದಿರು, ಹೇ ಭೀರು, ಏತಕೀ ದಿಗಿಲು?
ನೀ ನೆನೆದೆ, ನಾನಾದೆ ನಿನ್ನಭೀಷ್ಟದೊಲು.

ಅಹಲ್ಯೆ

(ಭ್ರಾಂತಳಾಗಿ, ಬಾಯಿಕಟ್ಟಿಹೋದವಳಂತೆ)

ಎಲೆ ದುರುಳ ನೀನಾರು, ಈ ಕಪಟವೇಕೆ?
ಎನಿತು ಧೈರ್ಯವೊ ನಿನಗೆ ಮುನಿಸತಿಯ ಕೆಣಕೆ?

ಇಂದ್ರ

ಒಲುಮೆ ಸೆಳತಕೆ ಸಂದ ಸುರರ ದೊರೆ ನಾನು—
ತ್ರಿಜಗವಂದಿತನಿಂದು ನಿನಗಾದ ಶರಣು.

ಅಹಲ್ಯೆ

(ಅದೇ ಬೆರಗಿನ ಭಾವದಲ್ಲಿ)

ಹೇ ದಿವ್ಯದರ್ಶನನೆ, ದಿವದರಸೆ ನೀನು!
ಹೆರರ ಸತಿಗಾಶಿಸುವ ನಿನ್ನ ಘನವೇನು?

ಇಂದ್ರ

ಏನೆಂಬೆನೆಲೆ ಚೆಲುವೆ ಈ ಮರುಳತನಕೆ?
ಹೊರತೇನು, ನನ್ನರಸಿ, ಒಲಿದಿರುವ ಮನಕೆ?
ಒಲಿದವಗೆ ಹಿರಿದೊಲವು, ಅದಕು ಘನವಿಲ್ಲೆ;
ನನ್ನೆಲ್ಲ ಭಾಗ್ಯಕೂ ಮಿಗಿಲಾವೆ, ನಲ್ಲೆ.

ಅಹಲ್ಯೆ

ಹೇ ಭ್ರಾಂತದೇವತೆಯೆ ಹೋಗು ಬಳಿವಿಡಿದು—
ನಿನ್ನ ಬಗೆ ನೀನರಿತು ನನ್ನಾಸೆ ತೊರೆದು.

ಇಂದ್ರ

ನನ್ನ ನಾನರಿತಿಹೆನು, ನಿನ್ನ ನೀನರಿಯೆ.
ರೂಢಿಗೀತೆರ ನುಡಿವೆ, ಎಲೆ ಮುಗುದೆ, ಅರಿಯೆ.
ನಿನ್ನೆಲ್ಲ ಆಸೆಗಳ ಸಲಿಸಬಲ್ಲವನು
ನಿನ್ನೊಲುಮೆಭಿಕ್ಷೆಯನು ಬೇಡಿ ನಿಂದಿಹನು.

ಅಹಲ್ಯೆ

ಓ ಸರ್ವದರ್ಶನನೆ ಇಂತೊರೆಯಬೇಡೈ,
ನನ್ನ ಮರ್ಮವ ಹಿಡಿದು ಇಂತು ನುಡಿ ಬೇಡೈ.

ಇಂದ್ರ

ಮರುಳ ಗೌತಮನೆಂತು ನನ್ನ ಸಮನಹನು—
ತಪದಿ ದೇಹವ ಬರಿದೆ ಒಣಗಿಸುತ್ತಿಹನು !
ಆ ನಚ್ಚ ಬಿಡು, ನಲ್ಲೆ, ಕನ್ನಡಿಯ ಗಂಟು !
ನಿನ್ನ ಬಯಕೆಗಳೆಲ್ಲ ಸಲೆ ನಾನೆ ನಂಟು.

ಅಹಲ್ಯೆ

ಹೇ ಸರ್ವಶಕ್ತನೇ, ಎನ್ನ ಕೆಡುಶಕುತಿ !

ಇಂದ್ರ

ಎನ್ನಿಂದಲಹುದೊಲವೆ ನಿನ್ನಾಸೆಮುಕುತಿ.
ನಂದನದ ತೋಟದೊಳು ಮಂದಾರ ಮುಡಿದು
ಕಲ್ಪಲತೆ ಮಾಡದೊಳು ಸವಿಯ ಸೊಡೆಗುಡಿದು
ಮರೆಯೊಳಗೆ ಕಿನ್ನರಿಯರೊರೆವ ಗೀತಕ್ಕೆ
ಮನಸೋಲುತಪ್ಪ ಬಾ ದಿವಸ ಮೋದಕ್ಕೆ !

ಅಹಲ್ಯೆ

ಓ ಮನೋವಿಭ್ರಾಂತಿ. ಓ ಆಸೆ ಕಣಸೆ !

ಇಂದ್ರ

ಭ್ರಾಂತಿಯಲ್ಲವು ಕಾಂತೆ, ನನ್ನಿ ಇದು ನನಸೆ.
ತಾರೆಗಳ ನೂಪುರವ ತೊಡಿಸುವೆನು ಅಡಿಗೆ
ಕೊಂಕುಪೆರೆಯನು ತಂದು ಮುಡಿಸುವೆನು ಮುಡಿಗೆ!
ಕ್ಷೀರಪಥ ಮೇಖಲೆಯನೊಪ್ಪಿಸುವೆ ಕಟಿಗೆ
ಕೊನೆಗೆನ್ನ ಮಕುಟವನೆ ಮುಡಿಪಿಡುವೆ ನಿನಗೆ!

ಅಹಲ್ಯೆ

ನನ್ನಿರವು ಕುರುಡಾಗಿ ಕೋರೈಪ ಬೆಳಕೆ.
ಮೊದಲಿರುಳೆ ಸೈ ಎನಿಪೆ ನೀನೆನ್ನ ಮನಕೆ.

ಇಂದ್ರ

ಮಂಗ ಮಾಣಿಕವನು ಬಿಸುಡುವೊಲು ಮುಗುದೆ
ಬಳಿಸಂದ ಭಾಗ್ಯವನು ಬಿಸುಡದಿರು ಬರಿದೆ.

ಅಹಲ್ಯೆ

ಶರಣಾದೆ ಶರಣಾದೆ, ದೇವ, ನಿನಗಿಂದು—
ಸತಿಯು ಗೆಲೆ ಬಯಸದಿರು ಮರೆಯಾಗು ನಂದು.

ಇಂದ್ರ

ಸತಿತನವನೆಂತಳಿವೆ, ಭೀರು, ಒಲಿದೆನಗೆ?
ಮೊದಲಿಳೆಯ ಮಡದಿಯರು ಸಲುವರಮರರಿಗೆ.

ಅಹಲ್ಯೆ

ಹರಕೆ ಇಡೆ ಮಂಗಳಕೆ, ಏನೊರೆವೆಯಿಂದು?
ಹಿಂಗೆನ್ನ ಬಯಕೆ, ಕನಸೆ ಮರಸೊಂದು.

ಇಂದ್ರ

ಇಂತೆಯೇ ನಿನ್ನಿಚ್ಛೆ ; ಎಲೆ ಬೆರಗಿನಬಲೆ ?
ಕನಿಕರಿಪವರೆಗಿಹೆನು ನಿನ್ನ ಹಂಬಲೊಳೆ.

(ಮರೆಯಾಗುವನು.)

ಅಹಲ್ಯೆ

ಮುಂಚಿತಚ್ಚರಿಬೆಳಕು,
ಕವಿಯಿತಿರುಳು ;
ಮರೆಯಾಯಿತೀ ಕಣಸು,
ದಿಟ್ಟ ಬಯಲು !
ಶಾಂತವಾಗೆಲೆ ರಾಗ ಹೃದಯದಾವೇಗ !
ಭ್ರಾಂತೆ ನಾ ಭ್ರಾಂತೆ ನಾನೇಗೈವೆನೀಗ ?

ಗಾಳಿ ದನಿಗಳು

ಮರುಳೆ ಹೆಣ್ಣೆ ಏನ ಗೈದೆ ?
ಸಾವವರೆಗು ಮರುಗಲಾದೆ.

ಎಲ್ಲರಾಸೆ ತಪದ ಪುಣ್ಯ
ಹುಚ್ಚಿ, ಈ ಸುರವರೇಣ್ಯ !

ಇಂಥ ಭಾಗ್ಯ ಬಾಳಿಗಹುದು
ಯುಗಕೊಮ್ಮೆಗೆ, ಹೋಯ್ತು ಹರಿದು !

ಮುರುಟಿದೆಯಲಾ ನೀನೆ ಮುಳ್ಳಿ
ನೀನೆ ಬೆಳೆದ ಬಯಕೆ ಬಳ್ಳಿ !

ಮಂದಭಾಗ್ಯೆ, ಹುಸಿಯಿತೊಲವು ;
ಬಯಕೆಗಾದೆ ತಿರುಗಿ ತೆರವು.

ದೇವಗೆಂಥದಮ್ಮ ಧರ್ಮ ?
ಏವೇಳ್ವೆ ನಿನ್ನ ಕರ್ಮ !

ಅಹಲ್ಯೆ

ದಿಟ ! ಓ ದಿಟ ಬಾಂದನಿಗಳೆ
ನನ್ನೊಳ ನುಡಿ ಇಂತೆ
ಮಾರ್ದನಿಗೊಡುವುದು, 'ಮರುಳೆ
ಎಡರಾಯಿತಹಂತೆ !'
ಕದಡಿದ ಬಗೆ ಮದಡಾಯಿತು
ಮುಂಗಾಣದೆ ಹೋದೆ ;
ಒಳಗೊಗೆದೀ ಹೊಸ ಮಿಂಚಿಗೆ
ಬೆಚ್ಚಿದೆ ಬೆರಗಾದೆ !

ದಿಟ, ತಿರುಳಿದು, ಬಾಳ್ ಪುರುಳಿದು
ಇರವಿನ ನನ್ನಿಯಿದು.
ಮಿಕ್ಕೆಲ್ಲವು ಹುಸಿ ! ಕೋ ಕೋ
ನಿನ್ನದು ನಿನ್ನದಿದು !
ಸಡಿಲಿದ ತೊಟ್ಟಿನ ಕಟ್ಟಿನ
ಅರಳಿದ ಮಲರಂತೆ
ಬಗೆ ಮುದಕಾಯಿತು ಬಾರಾ
ಬಾ, ಬಿರುವೆಲರಂತೆ !

ಬಾ ಸೊಗವೇ ಬಾ ರಾಗವೆ
ಬಾ ನಲವೇ ಕೊಳ್ಳು—
ತನುವಂ ಮನವಂ ನಾಣಂ
ಜಾಣಂ ನೀ ಕೊಳ್ಳು !
ಆಸೆಯು ಗಾಳಿಗೆ ಬಿರಿದೀ
ರಾಗದ ಪಂಕೇಜ
ಮುಡಿಪಾಯಿತು ನಿನಗೀ ಬಗೆ—
ಕೊಳ್ಳಿದ ಸುರರಾಜ !

ಇಂದ್ರ

(ಕಾಣಿಸಿಕೊಂಡು)

ಬಂದೆನಿದೋ ಬಂದೆನಿದೋ
　ತಿರೆಯರಳೇ, ಇಂತೆ
ಉಲ್ಲಸದೊಳು ಬನವೊಲಿಪೀ
　ಚೈತ್ರಾನಿಲನಂತೆ—
ಕಟ್ಟಿಲ್ಲದೆ ನಿಟ್ಟಿಲ್ಲದೆ
　ಬರಿಸೊಗವಪ್ಪನ್ನ
ಸುರಪಥದೊಳು ಸೌರಭದೊಲು
　ತೇಲಿಪೆ ಬಾ಼ ನಿನ್ನ!

ಅಹಲ್ಯೆ

ಬಾರೊಲವೇ ಬಾ ಮುದವೇ
　ಬಾ ಬಚ್ಚಿಟ್ಟಾಸೆ—
ಎಲ್ಲವ ಕೊಳ್ಳೆನ್ನಿಲ್ಲೆನೆ
　ಎನೆ, ಮುಕ್ತಿ ಇದ್ದೈಸೆ.
ನಿನ್ನವಳಾಂ ಇನ್ನಿಲ್ಲಾಂ
　ಇಂದಳಿದಳಹಲ್ಯೆ—
ಬಾಳ್‌ಮಿಗುವೀ ಅನುರಾಗಕೆ
　ಇಗೊ ಮಿಾಸಲಹಲ್ಯೆ!

(ಹೋಗುವರು.)

(ಸಂಗೀತವಾಗುತ್ತಿರುವುದು. ಒಂದು ಗಳಿಗೆ ರಂಗಸ್ಥಲವು ನಿರ್ಜನವಾಗಿರುವುದು. ಬಳಿಕ ಗೌತಮನು ಪ್ರವೇಶಿಸುವನು. ಸಂಗೀತವು ಬೇರೆಯ ರಾಗಕ್ಕೆ ಬದಲಾಯಿಸುವುದು.)

ಗೌತಮ

(ಪರ್ಣಶಾಲೆಯನ್ನು ನಿಟ್ಟಿಸುತ್ತಾ)

ಕಂಡಿತೆನ್ನೆಲೆಸಾಲೆ—ನನ್ನೊಲುಮೆ ಕರುಮಾಡ.
ಜೊನ್ನದೀ ಕಡಲಿನೊಳು ನನ್ನಿನಿಯಳಿಹ ಮಾಡ

ಸಿರಿಯನೆಡೆಗೊಂಡಿರುವ ಕಮಲದೊಲು ಕಾಣುತಿದೆ;
ಈ ನೋಟವೆನ್ನೆದೆಗೆ ಸಮ್ಮುದವ ಬೀರುತಿದೆ
ವಿವಿಧ ರಾಗವ ತೋರಿ, ಹಾರೈಸದೀ ಬರವು,
ಮೊದಮೊದಲ ದಿನದಂತೆ ಪೂರಗೊಂಡೀ ಒಲವು,
ಬೆರಗುಗೊಳಿಸುವುದವಳ, ನಾ ಬಲ್ಲೆ. ಈ ಮುಗುದೆ
ಚಕಿತದೃಷ್ಟಿಯೊಳೆನ್ನ ನೋಡಿ ನುಡಿಸಲು ಬರದೆ,
ಅರಿತು ಮೌನದಿ ತಗ್ಗಿ, ಮಂದಹಾಸವ ಬೀರಿ
ಎಂತು ಸ್ವಾಗತಿಸುವಳು ವಧುವಂತೆ ನಾಣೇರಿ!
ಸಿರಿಗುರುಳ ಪೆರೆನೊಸಲ ಎರಳೆಗಂಗಳ ಚೆಲುವೆ,
ನನ್ನ ವಂಶದ ತಾಯಿ, ನನ್ನಾಸೆ ನನ್ನೊಡವೆ—
ಎಂತಿವಳ ನಾನೊಲಿಪೆ—ಇಂದ್ರನೊಲೆ, ಚಂದ್ರನೊಲೆ?
ಎನಿತು ಚೆಲುವೀ ಇರುಳು ನಮ್ಮೊಲುಮೆಗಾದವೊಲೆ!

ಅಂಚೆಯಂತೆ ತೇಲುತಿಹನು
ಆಗಸದೊಳು ಇಂದುವು;
ಕೊಂಚೆಯಂತೆ ಸಾಲಿಟ್ಟುವು
ಬಿಳಿಯ ಮುಗಿಲ ತಂಡವು.
ವಿಶ್ವ ನೀಲ ನೀರಧಿಯೊಳು
ತಿರೆಯ ಕುಮುದವರಳಿತೆನಲು
ಸೂಸುತಿಹುದು ಸೌಸವಂ
ತುಂಬುತಾಕಾಶವಂ.

ಅದೆಕೊ ಮೇಘಪಥದೊಳೆಂತು
ಮಿತಿಯಿಲ್ಲದ ಮೋದದಿ
ತೇಲುತಿಹರು ಸುರದಂಪತಿ
ಸ್ಮೃತಿ ಇಲ್ಲದ ತೋಷದಿ!
ಇಂದ್ರಪುರಿಯ ನಂದನದೊಳು
ಇಂಥ ಸೊಗಸು ಕಾಣದಿರಲು

ಬಂದರಿವರು ಮೈಗ್ಗೈಸಿ
　ತಿರೆ ಎಲೆಗೆ ಹಾರೈಸಿ.
ಆಹಹ !—
ರಾಗದಾವೇಗವೆಂತೊ
　ಅಂತೆ ಮಲೆವರತ್ತ—
ಕಾಮದೇವನೆಳೆತವೆಂತೊ
　ಅಂತೆ ಒಲೆವರಿತ್ತ !
ಏಳ್ವರಿತ್ತ ಬೀಳ್ವರತ್ತ
ಕೊನೆಗಿಳಿವರು ಭೂಮಿಗಿತ್ತ—
ಮಲರ ಜೊತೆಗೆ ಸೊಕ್ಕುತ ಅಳಿ
　ನೆಲಕುರುಳುವ ಚೆಂದದಲಿ !

(ಕೆಲವು ಹೂಗಳನ್ನು ಆರಿಸುತ್ತ)

ಎಂಥ ನೋಟ ! ಎಂಥ ಬೇಟ
　ಎಂಥ ಮುಕ್ತಿಯಾಟ !
ಮೋದಕೊಂದಕಾಗಲಿಂದು
　ಇಂತೆ ನಮ್ಮ ಕೂಟ—
ಬೆಳುದಿಂಗಳ ಈ ಇರುಳೊಳು
ನನ್ನಿನಿಯಳ ನಾನೊಲಿಸಲು
ಬಂದುದೆ ಸೈ ತಪಬಿಟ್ಟು
　ಮುದಕಿರವನು ಮುಡುಪಿಟ್ಟು.

(ಪರ್ಣಶಾಲೆಯ ಬಾಗಿಲಿಗೆ ಹೋಗಿ)

ಅಹಲ್ಯೆ ! ಅಹಲ್ಯೆ !

(ಬಾಗಿಲನ್ನು ನೂಕಿ ತೆರೆದು)

ತೆರವೀ ಮನೆ, ಬಯಲೀ ಮನೆ !
　ಒಂಟಿಯೊಳೀ ಹಸುಳೆ

ಮಲಗಿರುವನು—ನಡುವಿರುಳೊಳು
ಎಲ್ಲಾದಳು ತರಳೆ?

ಪವಡಿಸದಂತೀ ಹಾಸಿಗೆ
ತುಸ ಮಾಸದೆ ಇಹುದು—
ನನ್ನನೆನೆನೆದೀ ವಿರಹಿಣಿ
ನಿದ್ದಿಸದಿರಬಹುದು.

ಮನೆ ಹೊರಗಣ ಮೊದಲೊಲುಮೆಯ
ಬಳ್ಳಿಯ ಚಪ್ಪರದಿ
ಇರುಳಳೆವಳೊ ಸಹಧರ್ಮಿಣಿ
ಸವಿನೆನಪಿನ ನೆನವದಿ?

ಹಸುಳೆ

(ಕನವರಿಸುವುದು)

ನನಗೆ ಭಯವಾಯ್ತಮ್ಮ ನಿನ್ನ ಕಾಣದೆಯೆ!

ಗೌತಮ

ಬೆಚ್ಚರಗೊಳ್ಳದೆ ಕಂದಾ
ಮಲಗಿರು; ನಾ ಭರದೆ—
ಇನ್ನಗಲಿಕೆ ಇಲ್ಲದವೊಲು
ತಹೆ ತಾಯಿಯ ಮುದದೆ.

(ಹೊರಗೆ ಬರುವನು—ತೆರೆಯ ಕಡೆ ಸರಿಯುವನು.)

ತೆರೆ

## ದೃಶ್ಯ ೩

(ಪೂರ್ವೋಕ್ತವಾದ ಬಳ್ಳಿಯ ಚಪ್ಪರವಲ್ಲಿ)

ಅಹಲ್ಯೆ

ಸೊಗದ ಸುಳಿಗಾಳಿಯೊಳು ತರಗೆಲೆಯು ತೆರದಿ
ಬಾನಲೆದು ಬಸವಳಿದೆನೈ ಪ್ರೇಮಭರದಿ!

ಇಂದ್ರ

ಈ ತೋಳಿನಂದಣದಿ ನನ್ನೊಲವೆ ತಂಗು—
ಶಶಿಗೆ ಶಶಿಕಲೆಯಂತೆ ಆಗಲೀ ಪಾಂಗು.

ಅಹಲ್ಯೆ

ಮುಟ್ಟಲೊಡೆಯುವ ನೀರ ಹೊಳೆಗುಳ್ಳೆಯಂತೆ
ಮೋದವೆಂತಾಯಿತಹ! ಆದೆ ವಿಭ್ರಾಂತೆ!

ಇಂದ್ರ

ಹೊಸತೆಂದರಾವುದಕು ಬೆಚ್ಚುವುದು ಮನವು—
ಭ್ರಾಂತಿ ಎನಿಸಿತೆ ಕಾಂತೆ ದೇವೇಂದ್ರನೊಲವು?

ಅಹಲ್ಯೆ

ಧನ್ಯಳೆನಿಸಿದೆ, ದೇವ, ಒಲುಮೆವರವಿತ್ತು.
ಪೋ ಇಂದ್ರ, ಸೊಗ ಬೆಳಸಲಹುದದುವೆ ಕುತ್ತು.

ಇಂದ್ರ

ಬೇಸರಾಯಿತೆ ನಿನಗೆ ಶಕ್ರನೀ ಸಂಗ—
ಆಸರೇ ನಿನಗೆ ಸಖಿ ಈ ಪರಿಷ್ವಂಗ?

ಅಹಲ್ಯೆ

ನಲವುಕ್ಕೆ ನಲಿಯಿಸಿದೆ, ಆಸೆ ಹಿಂಗಿಸಿದೆ—
ಹೋಗೀಗ, ನನ್ನೊಲವೆ, ನನ್ನ ಹಂಗಿಸದೆ.

ಇಂದ್ರ

ಇದ್ದಕಿದ್ದವೊಲೇಕೆ ಬಗೆ ಬೇರೆಯಾಯ್ತು—
ಆವ ಶಂಕೆಗೆ, ಭೀರು, ನಲವರತುಹೋಯ್ತು ?

ಅಹಲ್ಯೆ

ಪೋ ದೇವ ನುಡಿಸದೆಯೆ ನಮ್ಮ ಸೀ ಹರಸಿ,
ನನ್ನಿಂದ ನಿನಗಾದ ಸಮ್ಮುದವ ಸ್ಮರಿಸಿ.

ಇಂದ್ರ

ಧ್ಯಾನಜಡ ಗೌತಮುನ ಭೀತಿ ನಿನಗೇನು ?
ಇಳೆಯನೇ ಉಳಿವ ಬಾ—ಬಾ, ನಾನು ನೀನು.

ಅಹಲ್ಯೆ

ಒಲಿದರೆಚ್ಚರದಿಂದ ಒಳ ನೋಟದಿಂದ
ಪಳಿಯರಿತು ಮುನಿ ಮುನಿಸ ಮುನ್ನ. ಪೋ ಇಂದ್ರ !
ಆಲಿಸಿಗೊ ! ಪೋ ನೀರ !....ಹಾ ! ಮೀರಿತು !
ರುದ್ರಗೌತಮುನಯ್ಯೊ ! ಬಾಳಾರಿತು !

(ಮೂರ್ಛೆ ಹೋಗುವಳು.)

ಇಂದ್ರ

ಹಾ ಪ್ರಮಾದ !—ಹೋ ಗೌತಮ ! ಬಿದ್ದಳೀ ಅಬಲೆ
ಏ ಗತಿ ! ಏ ಗತಿ !

(ನಿಸ್ತೇಜನಾಗುವನು.)

(ರುದ್ರವೂ ಕರುಣರಸಪೂರಿತವೂ ಆದ ವಾದ್ಯಗಳ ಮೇಳದ ಸಂಗೀತ
ಸ್ವಲ್ಪ ಹೊತ್ತು ಮೊಳಗಿ ಶಾಂತವಾಗುವುದು.)

ತೆರೆ

## ದೃಶ್ಯ ೮

(ಗೌತಮಾಶ್ರಮದಲ್ಲಿ ಒಂದು ಕತೆ ನತಶಿರನಾದ ಗೌತಮನೂ ಮೈತ್ರೇಯನೂ ಪ್ರವೇಶಿಸುವರು. ವಟುವು ದೂರದಲ್ಲಿರುವನು.)

ಗೌತಮ

(ಕುಳಿತು, ತನಗೆ ತಾನೆ ನಿಟ್ಟುಸಿರಿಟ್ಟು)

ಇಂತಾಯ್ತು ನನ್ನಾತ್ಮಸಂಯಮದ ಮೆಚ್ಚು—
ಜಗ ಜಗವೆ ನಗುವಂತೆ ನಾನಾದೆ ತುಚ್ಛ!....
ವ್ರತಗೆಟ್ಟು ಬಂದೆನೀ ಪಾಪ ಕೋಪಕ್ಕೆ—
ಮನ ಕಾಮವಾಯಿತೀ ಶಾಪತಾಪಕ್ಕೆ.
ಎತ್ತ ಹೋಗಲಿ ನಾನು ನನಗೆ ಮರೆ ಎಲ್ಲಿ?
ಸುಟ್ಟುಕೊಳಲೇ ಬಾಳ ಜಗವುರುಹುತಿಲ್ಲಿ?

ಮೈತ್ರೇಯ

ಇಂತವಶರಪ್ಪರೇ ನಿನ್ನನ್ನರಯ್ಯ?

ಗೌತಮ

(ತನಗೆ ತಾನೆ)

ತನ್ನ ಪಳಿ ತಾನೊರೆಯುತಳುತಿರಲಿ ಇವಳು—
ಒಬ್ಬರೂ ಇಲ್ಲದಳೆ ಅಯ್ಯೊ ಎಂದೆನಲು!
ಅನ್ನ ನೀರಿಲ್ಲದೆಯೆ ಧೂಳಿನಲಿ ಹೊರಳಿ
ಆರ ಕಣ್ಣಿಗು ಬೀಳದೆ ಗಾಳಿಯುಂತಿರಲಿ!

ಮೈತ್ರೇಯ

ಏಕಿಂತು ಶಾಪವನು ಮರಮರಳಿ ನುಡಿವೆ?
ಇಂಪ್ರನೇ ನೀತಿಗೆಡೆ ಬಿದ್ದಳೀ ಬಡವೆ.

ಗೌತಮ

(ತನಗೆ ತಾನೆ)

ಆಃ! ನೀಚ ಪಾಪಿಷ್ಠ, ಹೋಗಲವ ಕೆಟ್ಟು—
ನಿರ್ನಿರಿಂದ್ರಿಯನಾಗಿ ಕಪಟ ದಿಕ್ಕೆಟ್ಟು!....

ಮೈತ್ರೇಯ

ಕೋಪವನು ಸಂಹರಿಸು ಶಾಂತನಾಗಣ್ಣ,
ಆದುದನು ಚಿಂತಿಸಲು ಬಗೆಗೆ ಬರಿ ಬಣ್ಣ.

ಗೌತಮ

ಕೆಂಡವನು ಅಂತಿರುವ ಬಟ್ಟೆಯಂತೆನ್ನ
ಈ ಬಾಳನೀ ಜೀವ ಸುಡುತಿಹುದೊ ಅಣ್ಣ!

(ತನಗೆ ತಾನೆ)

ಏಗೈವೆ ಏಗೈವೆ ಏಗೈವೆನೀಗ?
ಏಬಗೆದೆನೆಂತಾಯ್ತು ಈ ತಪದ ತ್ಯಾಗ!....
ರಾಗಕ್ಕೆ ಈಡಾಗಿ ಮೋಹವಶನಾಗಿ
ಕೆಟ್ಟೆನೋ ಕೆಟ್ಟೆನೋ ಆತುಮವ ನೀಗಿ!

(ತುಸು ಮೌನದಿಂದಿದ್ದು ನಿಟ್ಟುಸಿರಿಟ್ಟು)

ದಿಕ್ಕಿಲ್ಲದಂತಾದೆ ಈ ಲೋಕದೊಳಗೆ
ಹರಿಗೋಲು ಮುಳುಗಿತ್ತು ಭವಜಲಧಿಯೊಳಗೆ!

ಮೈತ್ರೇಯ

ನೀ ನಿರೀಹತೆಗಾಗೆ ನಮಗಾರು ದಿಕ್ಕು?
ನೀನೆಮ್ಮ ಬಾಳ್ಬೆಳಕು ಇಂದುಮುಂದಕ್ಕು.

ಗೌತಮ

ಕಾಮವಶೀ ಕ್ರೋಧವಶೀ ನಷ್ಟಾತ್ಮಂ ವಿರಸಿ!
ತನ್ನನೆ ತಾ ಗೆಲ್ಲದವಂ ಇಕೊ ಈ ಹುಸಿ ತವಸಿ!

ಗತಮತಿಯನು ನಚ್ಚುವರೇ ಭವದುರ್ಗಮ ಪಥದಿ?
ಇನ್ನಿರೆ ನಾನೀ ತಾಣದಿ, ಬೀಳ್ಕೊಡು ಸಮ್ಮತದಿ.

ನನ್ನೆಳೆಯಗೆ ನೀನೇ ಪಿತ, ಮಾಧವಿ ತಾಯಿನ್ನು
ನಮ್ಮನು ಮರೆವಂತವನನು ಕಾಪಿಡಿರೀ ಮುನ್ನು.
ಪಳಿದಾಣವನಿದ ತೊರೆಯುತ ಬೇರೊಂದೆಡೆ ನೆಲಸಿ
ಇಲ್ಲಿಂದಾದುದ ನಿಮ್ಮಯ ಮನದಿಂದಲೆ ಅಳಿಸಿ.

ಮರುಗುವೆ ನಾನೀ ಹೆಣ್ಣಿಗೆ: ಒಲಿದಳು ದೇವತೆಗೆ
ರಾಗಭ್ರಾಂತಿಯೊಳಳಿದಳು ನನ್ನಯ ಮೂಢತೆಗೆ!
ವಿಧಿನಿಯಮವ ಮೀರಿದರಾರ್? ಈ ಚೇತನವಿಂತು
ಶುದ್ಧಿಗೆ ಬರೆ ತವಿಸುತ್ತಿದೆ ಮಮ ಶಾಪವನಾಂತು.

ಬಾಳ್‌ಬಾಳಿಗು ಏನಂತರ! ಇದ್ದೆವು ಸನಿಯದೊಳೇ—
ಒಬ್ಬರ ಹಂಬಲವೊಬ್ಬರು ತುಸವೂ ತಿಳಿಯದಲೇ!
ತಾನೆನ್ನುವ ಮರೆಗಾಗಲು ಆತ್ಮದ ಬೆಳಕಿಂತು
ತನ್ನಲ್ಲದೆ ಬೇರೊಂದನು ಕಾಣುವ ಬಗೆಯೆಂತು?

ಹಿಮಗಿರಿಯೇಕಾಂತದ ಗವಿ—ಆತ್ಮವಿಸಂಬೋಧಿ!
ಈ ಬೇಗೆಯ ನಂದಿಸಲಹುದಾ ಶಿಶಿರ ಸಮಾಧಿ!
ಬೀಳ್ಕೊಡು, ಕೆಳೆಯಾ, ಹೋಗುವೆ ನನ್ನೊಳಗನು ತಿಳಿಯೆ
ವಿಶ್ವಾತ್ಮದ ಚಿಂತನೆಯೊಳು ನಾನೆಂಬುದನಳಿಯೆ.

(ಹೋಗುವನು.)

(ಮೈತ್ರೇಯನ ಹತ್ತಿರ ವಟುವು ಬರುತ್ತಿರುವನು.)

ಮೈತ್ರೇಯ

(ತನಗೆ ತಾನೆ)

ಹೋದನು ಗೌತಮ ಎಲ್ಲವ ತೊರೆದು,
ಸುತ್ತಲೆತ್ತಲೂ ಬರಿದೋ ಬರಿದು!

ಮಸಣವಿದಾಯಿತು ಮಂಗಳ ನಾಡು
ಗಾಳಿಗಳೂಳುವ ಗೋಳಿನ ಬೀಡು!
ಹಾರೈಸಿದುದೇನಾದುದು ತಾನೇಂ ?
ಹಿಂಬದಿಯೊಳು ವಿಧಿ ನಕ್ಕುದ ಕಾಣೆಂ.
ಹಸುಳೆ ಬೆಸಗೊಳ್ಳಲೇನೆಂದೊರೆವೆ ?
ಎಂತೀ ತಾಯ್ನೆಲವನು ನಾ ತೊರೆವೆ ?
ಫಕ್ಕನೆ ತುಡುಕಿತು ನಮ್ಮ ವಿಪತ್ತು
ಮುಂದ ತೋರದೋ ಈ ಆಪತ್ತು.

(ಹತ್ತಿರ ಬಂದ ವಟುವನ್ನು ಕುರಿತು)

ಬಾ ಕೌಶಿಕ, ಬಾ, ಅಳದಿರು ಕಂದ,
ಇಂತಾಯಿತು ವಿಧಿಯಾಟದ ಚೆಂದ!

ತೆರೆ

# ಮಧ್ಯಮಾಂಕ

---

## ದೃಶ್ಯ ೧

(ಸ್ವರ್ಗದಲ್ಲಿ ಒಂದು ಸ್ಥಾನ. ಅಪ್ಸರೆಯರು ಸಲ್ಲಾಪದಲ್ಲಿ ತೊಡಗಿದ್ದಾರೆ.)

ಒಬ್ಬಳು

ಸ್ವರ್ಗದೊಳೆ ಸೊಗವಿಲ್ಲ, ಸುರರಿಗುಲ್ಲಸವಿಲ್ಲ,
ನಂದನದೊಳಾನಂದವರತುಹೋಯ್ತು.
ಸಲ್ಲಾಪಕೆಡೆಯಿಲ್ಲ, ಸಂಗೀತಕೆಡರಾಯ್ತು,
ನಮ್ಮ ಕಲಿಕೆಗಳೆಲ್ಲ ಮರೆತೆಹೋಯ್ತು.

ಎರಡನೆಯವಳು

ಚೆಲುವ ನೋಡುವರಿಲ್ಲ, ಕೊರಲನಾಲಿಪರಿಲ್ಲ,
ಕಡೆಗಣ್ಣ ನೋಟಕ್ಕೆ ಕರಗುವವರಿಲ್ಲ.
ರೂಪುಕುಂದಿದೆನೇನೊ ಎಂದು ಶಂಕಿಸಿ ನಾನು
ಕನ್ನಡಿಯ ಮುಂಗಡೆಯೆ ಕಳೆವೆ ಹೊತ್ತೆಲ್ಲ!

ಮೂರನೆಯವಳು

ನೋಡುವೊಲು ನೋಡನು, ಆಡುವೊಲು ಆಡನು
ಇರುತಿಹನು ಸರ್ವದಾ ಮರವಟ್ಟನಂತೆ;
ಮೊಗಕೊಟ್ಟು ನುಡಿಯನು, ಮುಂದಿಯೊಡಗೂಡನು,—
ಏನೆ ಸಖಿ, ದೇವೇಂದ್ರ ದೊರೆಗೇನು ಚಿಂತೆ?

ನಾಲ್ಕನೆಯವಳು

ನೂರು ಚಿಂತೆಗಳುಂಟು ಜಗವಾಳುವರಸನಿಗೆ—
ನಾವೆಂತು ಬಲ್ಲೆವೇ ಏಚಿಂತೆಯೆಂದು?

ಮೊದಲನೆಯವಳು

ಅಗೊ ನಮ್ಮನರಸುತ್ತ ರಂಭೆ ಬರುತಿಹಳಿತ್ತ
ಆವುದೋ ಕೌತುಕದ ಬ್ಯೂಹ ತಂದು.

(ರಂಭೆ ಸಡಗರದಿಂದ ಪ್ರವೇಶಿಸುತ್ತಾಳೆ.)

ರಂಭೆ

ಬನ್ನಿ ಬನ್ನಿ ಪ್ರೇಮದೇವನೆಚ್ಚರಿಸುವ ಬನ್ನಿ:
ವೀಣೆ ತನ್ನಿ ತಾಳ ತನ್ನಿ ಮದನ ಪರಾಕೆನ್ನಿ.
ದಿವದ ಬಾಳ ಕವಿದ ಬನ್ನದಿರುಳು ಜಾರಲೆಂದು,
ಸುಪ್ರಭಾತ ಗೀತವೆನ್ನಿ—ಒಲವೆ ಎಚ್ಚರೆಂದು.
ಅಗ್ನಿ ಎರೆಯೆ ಶಮಿತವಾಯ್ತು ಪಿತಾಮಹನ ಕೋಪ;
ರಾಹು ಶಶಿಯ ಬಿಡುವ ತೆರದಿ ಹರಿಯಿತಿಂದ್ರಶಾಪ.
ತಿರೆಯ ಹೆಣ್ಣಿಗನುತಪಿಸುವ ದೊರೆಯ ಚಿಂತೆ ನೀಗೆ,
ಬನ್ನಿ ಉದಯಗೀತವೆನ್ನಿ ಒಲವಿಗೆಚ್ಚರಾಗೆ.

ಎರಡನೆಯ ಅಪ್ಸರೆ

ಏನುಮಾತೆಂಬೆ ರಂಭೆ, ಎಚ್ಚರಿಸುವುದಾರನು?
ನಿದ್ದಿಪುದೇ ಲೇಸು ಲೇಸು ಈ ಕುಚೋದ್ಯಗಾರನು!
ಆತನಿಂದ ದೊರೆಗೆ ಬನ್ನ—ದಿವವೆ ಆಯ್ತು ಖಿನ್ನ;
ಅವನ ಮಾತನೆತ್ತದಿರೌ ಇದಿರೊಳಿನ್ನು ಮುನ್ನ.

ನಾಲ್ಕನೆಯ ಅಪ್ಸರೆ

ದೂರಬೇಡ ಒಲವ ಗೆಳತಿ, ಅವನದೇನು ತಪ್ಪು?
ಆಸೆಮಿಂಚು ಕೋರೈಸಲು ತಪ್ಪಿತವನ ನೆಪ್ಪು.
ಬಾನೊಳೆದ್ದು ಬಾಲಚುಕ್ಕಿ ಇದ್ದಕಿದ್ದ ರೀತಿ
ತಾರೆ ಮರೆಸಿ ಇರುಳ ಮೋಹಿಪಂತೆ ಇವರ ಪ್ರೀತಿ.

ರಂಭೆ

ತಪ್ಪೊ ನೆಪ್ಪೊ ತರ್ಕವೇಕೆ, ಬನ್ನಿ ಸಖೀ ಬನ್ನಿ,
ಪ್ರೇಮಸುಪ್ತ ಜಗದಿ ಮೋದ ಸುಪ್ತವಾಯಿತೆನ್ನಿ.
ಜೀವ ಜೀವರೊಬ್ಬರೊಬ್ಬರೊಳಗನಾಮಯದಂತೆ
ವಿರಸತೆಯೊಳು ತೊಳಲುತಿಹರು ಒಲವೆ ಮಲಗಲಿಂತೆ.

ತಿರೆಯು ಬಾಳೊಳಾಯಿತೊಂದು ಭೀಮ ಕಾಮ ಭೂತ,
ಬಾಳ ಬಾಳ ಹಿಂಡುತಿಹುದು, ಸೃಷ್ಟಿಯಾಯ್ತು ಭೀತ ;
ಮೊರೆಯು ಮುಟ್ಟತಿಲ್ಲಿಗಾದೊಡರಸು ಕಿವುಡನಂತೆ
ಉದಾಸೀನನಾಗಿಹನೌ. ಆತಗದೇ ಚಿಂತೆ.

ಮಿಥಿಲೆಬನದೊಳೇಕಾಕಿನಿ ಅನುತಾಪವಿಹೀನೆ
ತತ್ಕೃತಿಶುಚೆ ಬಾಷ್ಪಮುಚೆ ಪರಿತಾಪವಿದೀನೆ
ಗೌತಮಸತಿ ; ಅವಳ ಕೊರಗು ವಜ್ರಮನಕೆ ತಟ್ಟೆ
ಕಾರ್ಯವಿಮುಖನಾಗಿಸಿಹುದು ಉತ್ಸಾಹವ ಮೆಟ್ಟಿ.

ಚೈತ್ರನಂಜಿ ಹೊಗದ ತಾಣ, ಮಂದಿಯುಸಿರ ಕಟ್ಟೆ
ಸನ್ನೆಯಿಂದ ತೋರ್ಪ ತಾಣ, ಅಲ್ಲೆ ದೊರೆಯು ದೃಷ್ಟಿ.
ಧರ್ಮನೊರೆದ : "ಬರುವನಗೋ ಅತ್ತ ಮಹಾಧೀರ ;
ಬಂದು ಮರುಕವೆರೆವನಹುದು ಸತಿಗೆ ನಿಸ್ತಾರ.

"ಜನಕಯಾಗವಾರ್ತೆ ಹರಡಲಿಳೆಯ ತವಸಿ ಮಂದಿ,
ಮಿಥಿಲೆಯತ್ತ ಸಾಲಿಟ್ಟಿದೆ ತಣಿವಿನಾಸೆಯೊಂದಿ.
ಮಗಳ ಚೆಲುವಿಗೆಳಸಿ ಪಣದ ಶಿವನ ಬಿಲ್ಲ ಗೆಲ್ಲೆ,
ಹಮ್ಮಿನಿಂದ ನೆರೆದರಯ್ಯ ಕಾಮಿಯುರಸರಲ್ಲೆ.

"ಅಶ್ವಿಸಿಸುತರೊಪ್ಪೆ ಕೆಲದಿ ನಡೆವನಗ್ನಿ ಎಂತು
ದಾಶರಥಿಗಳೊಂದಿ ಬಹನು ಕುಶಿಕತನಯನಂತು.

ಉದಯದಲ್ಲಿ ಸೂರ್ಯಕಿರಣಕಳಿವ ಮಬ್ಬಿನೋಲು
ಇವರ ತೇಜ ಬದುಕ ಮುಟ್ಟಿ ಹರಿವುದಿವಳ ಗೋಳು.

"ಚಿಂತೆಯು ಬಿಡು, ಚೈತ್ರನಟ್ಟ; ಸಿಂಗರಿಸಲಿ ಕಾಡ,
ನಂದನದೊಲು ಅಂದಗ್ಗೈಯೆ ಸತಿಯು ತಪದ ಬೀಡ;
ಇತ್ತ ಹಾದಿ ಎಂದು ತೋರುವಂತೆ ಬನದ ದೇವಿ
ಅಲರು ತಳಿರು ಬಗೆಯು ಕೊಳಲಿ ದಾರಿಯುಳಲ ಸೋವಿ."

"ಎಬ್ಬಿಸೊಲವ ದಿನದ ಹೆಂಗಳಿಂದ: ಅವನ ದೃಷ್ಟಿ
ಸುರಿಯಲೆಲ್ಲ ಜೀವರೊಳಗು ಶಾಂತಿ ಪುಷ್ಟಿ ತುಷ್ಟಿ.
ಬಾಳ ಬಾಳ ಬೀಳುಗ್ಗೈವ ಸೋಗಿನೊಲವ ಕಾಮು
ಅಂಜಿ ನಾಚಿ ಅಡಗುವಂತೆ, ಎದೆಯೊಳಾಗೆ ಪ್ರೇಮು."

—ಎನ್ನಲರಸನಾಣೆಗೊಂಡು ಬಂದೆ ಸಖೀ ಬನ್ನಿ,
ವೀಣೆ ತನ್ನಿ ತಾಳ ತನ್ನಿ ಒಲವೆ ಎಚ್ಚರೆನ್ನಿ,
ಮಂಜಿನೊಳಗೆ ಕಮಲದಂತೆ ಕೊರಗುವಿಳೆಗೆ ಮೇಲ
ಎಸಗಲೊಲುಮೆ ಉದಯುವಾಗೆ ಹಸನಾಗಿಸೆ ಬಾಳ.

ಮೊದಲನೆಯವಳು

ಅರಸರಾಣೆ ಇಂತೆ ಸಖೀ! ಬನ್ನಿರೆಲ್ಲ ಬನ್ನಿ,
ವೀಣೆ ತನ್ನಿ ತಾಳ ತನ್ನಿ ಉದಯಗೀತವೆನ್ನಿ.
ಮಾರ ಪರಾಕೆನ್ನಿ
ಒಲವೆ ಎಚ್ಚರೆನ್ನಿ!

(ಎಲ್ಲರೂ ಹೊರಡುತ್ತಾರೆ.)

ತೆರೆ

## ದೃಶ್ಯ ೨

(ಮನ್ಮಥನ ಅಂತಃಪುರ. ಕಾವಲುಗಾರನು ತಿರುಗಾಡುತ್ತಿರುವನು. ಅಪ್ಸರೆಯರು ನವಾರಂಭಿಸಿದ್ದಾರೆ—ತೆರೆ ಏಳುತ್ತದೆ.)

ಅಪ್ಸರೆಯರು

(ಮರೆಯಲ್ಲಿ)

ಎಚ್ಚರೆಚ್ಚರು ಮಾರ ಮೂಜಗದ ಸಿಂಗಾರ
ಮನಮನದ ಬಂಗಾರ ಎಚ್ಚರೈ ಏಳೈ.

(ಕಾವಲುಗಾರನು ಬೆರಗಿನಿಂದ ಆಲಿಸಿ ಭ್ರುಕುಟಿಯನ್ನು ರಚಿಸಿ ಸಿಟ್ಟನ್ನು ತೋರಿ ತ್ತ ಇತ್ತ ನೋಡುವಾಗ ಅಪ್ಸರೆಯರು ಹಾಡಿಕೊಂಡು ಪ್ರವೇಶಿಸುತ್ತಾರೆ.)

ಒಲವರಸೆ ಚೆಲುವರಸೆ ನನೆಗೋಲ ಬಿಲ್ಲರಸೆ
ಸಕಲ ಸಮ್ಮುದದರಸೆ ಎಚ್ಚರೈ ಏಳೈ.

ಕಾವಲುಗಾರ

ಸದ್ದುಮಾಡದಿರಿ ಗಲಗುಮಾಡದಿರಿ,
ನಿದ್ದೆಗೈಯುತಿಹರರಸರು;
ಬುದ್ಧಿ ಇಲ್ಲವೇನಪ್ರಬುದ್ಧರೇ?
ಎದ್ದರೊಡೆಯರೇಗೈಯರು!

ತಾಳ ತಂಬೂರಿ ಮೇಳ ಚೆನ್ನಾಯ್ತು
ವೇಳೆ ನಿಮಗೆ ಒಂದಿಲ್ಲವೆ?
ನಿಮ್ಮನಿತ್ತೆಡೆಗೆ ಬಿಟ್ಟವರದಾರು?
ಹೇಳ್ವ ಕೇಳ್ವ ಜನವಿಲ್ಲವೆ?

= 30-1-76

ರಂಭೆ

ಕೋಪಗೊಳ್ಳದಿರು, ದ್ವಾರಪಾಲಣ್ಣ,
ಸಮಯವೇನೆಂಬೆ ಈಗ ನೀ?—

ಮಾಗಿ ಮುಗಿದಾಯ್ತು ಮಂಜು ಮುರಿದಾಯ್ತು
ಹೊಚ್ಚ ಹೊಸದಾಯ್ತು ಕುಂಭಿನೀ.

ಜುಗ್ಗ ಮಾಗಿ ಬಚ್ಚಿಟ್ಟ ಸಂಪತ್ತು
ಮಿಾಸಲಾಯಿತೋ ಮಧುವಿಗೆ ;
ಬನಬನದ ಕಂಪು ಹಕ್ಕಿ ಕೊರಲಿಂಪು
ಸೂರೆ ಹೋಯಿತೋ ಮರುತಗೆ.

ರಂಗುರಂಗಾಗಿ ರಾಗಕಿಂಬಾಗಿ
ಜನದ ಬಗೆಯಾಯ್ತೊ ಬಯಕೆಗೆ ;
ಹೆಣ್ಣು ಕಣ್ಣೋಟ ತಿಣ್ಣವಾಯ್ತಣ್ಣ.
ಮಲಗೆ ಮಾನವೇ ಒಲವಿಗೆ ?

ಕಾವಲುಗಾರ

ಇಂತೆಯೇ ಕೆಳದಿ, ಮಾಗಿ ಮುಗ್ಗಿತೇ
ಸುಗ್ಗಿಯಾಯಿತೇ ತಿರೆಯೊಳು ?
ಅತ್ತಣರಿವು ಎಂತಕ್ಕ ನಮಗಹುದು—
ಅಂತಃಪುರದೊಳಗೆ ಕಾವಲು.

ಒಡೆಯರೆಚ್ಚರಿಸೆ ತಕ್ಕುದೀ ವೇಳೆ
ಉದಯರಾಗವಂ ಹಾಡಿರೌ.
ನಿದ್ದೆ ಕನಸಾಗೆ ಕನಸು ನನಸಾಗೆ
ಮೃದುಳಗಾನವಂ ಗೈಯಿರೌ.

ಅಪ್ಸರೆಯರು

(ಹಾಡುತ್ತಾರೆ)

ಎಚ್ಚರೆಚ್ಚರು ಮಾರ ಮೂಜಗದ ಸಿಂಗಾರ
ಮನಮನದ ಬಂಗಾರ ಎಚ್ಚರೈ ಏಳೈ.

ಒಲವರಸೆ ಚೆಲುವರಸೆ ಸಕಲ ಸಮ್ಮುದದರಸೆ
ಜಗದ ನಲ್‌ಬಾಳ್ ಬೆಳಸೆ ಎಚ್ಚರೈ ಎಳ್ಳೆ.

ತಿರೆಯ ಕಾಡಿನ ಮುಡಿಯೊಳಲರಂಬು ಚೆಲುವಾಯ್ತು
ಕರಿಮುಗಿಲು ಜೊನ್ನವನು ತಳೆದಂತೆ ಎಳ್ಳೆ.
ದುಂಬಿ ಹೆದೆಗನುವಾಗಿ ಝೇಂಕಾರ ಗೈಯುತಿದೆ,
ಮಾಗಿ ಮಗ್ಗಿತು ಸುಗ್ಗಿಯಾಯಿತ್ತೈ ಎಳ್ಳೆ.

ಪದುಮ ಪಾದರಿ ಮೊಲ್ಲೆ ಮಲ್ಲಿಗೆಯ ಪರಿಮಳದಿ
ಈಸಿ ಕೈಬೀಸಿಹನು ಮಾರುತನು ಎಳ್ಳೆ.
ಹೊಂಗೆ ಹೂವಿಂ ಗೈದ ರಂಗವಲ್ಲಿಯು ಹಸೆಯೊ-
ಳೋಲಗವ ಕೊಡೆ ಚೈತ್ರ ಕರೆಯುತಿಹನೇಳ್ಳೆ.

ಗಿಳಿವಿಂಡ ಹೂಡಿಕೆಯು ಬಂದ ಮಾವಿನ ತೇರು
ಸಿಂಗಾರವಾಗಿಹುದು ಎಚ್ಚರೈ ಎಳ್ಳೆ.
ಕೋಗಿಲೆಯು ನಿಡುಕೊಂಬು ಸನ್ನೆಯನು ಗೈಯುತಿದೆ
ನೀ ಬಿಜಯಗೈವೆಯೆಂದೆಚ್ಚರಿಕೆ ಎಳ್ಳೆ.

ಹೊಸ ಹುಟ್ಟಿನುಲ್ಲಸವ ಸಫಲವಾಗಿಸೆ ಬಾರ,
ಹಸಿದ ಪಟು ಕರಣಗಳ ತಣಿಸಲ್ಕೆ ಬಾರ,
ಹುಸಿ ನೀತಿ ನೇತಿಗಳ ಕೋಟಲೆಯ ಕಳೆ ಬಾರ,
ಒಸಗೆಯಾಗಲಿ ನಿಯತಿಗೇಳಯ್ಯ ಮಾರ.

ಎಚ್ಚರೆಚ್ಚರು ಮಾರ...,

(ಶಯ್ಯಾಗಾರದ ಬಾಗಿಲನ್ನು ತೆರೆದು, ಹಾಡುತ್ತಾ ಮದನ ಪ್ರವೇಶಿಸುತ್ತಾನೆ: ಉಜ್ಜ್ವಲರೂಪು, ಮುಂಪಸ್ಮಿತ ರುಚಿರ ವದನ, ನೋಡಿಯೂ ನೋಡದ ನೋಟ.)

ಮದನ

ಕಂಪೊಳಹೊಮ್ಮಲು ದಳ ಬಿರಿವಂತೆ
ಇರುಳೊಳಬಾಗಿಲ ದಿನ ತೆರೆಸಂತೆ

ನಿದ್ರಾಮುದ್ರಿತಮಾದೆನ್ನಾತ್ಮವು
ಎಚ್ಚರಕರಳಿತಿಕೋ—
ಸುಂದರಮಂಗಳ ಸುಪ್ರಭಾತ
ಎಂತಾಯ್ತೆನಗಿದೆಕೋ !

(ಜಯ ಜಯ ಎಂದು ನಮಸ್ಕರಿಸುವ ಅಪ್ಸರೆಯರನ್ನು ನೋಡಿ ತಲೆಬಾಗಿ ನಗುತ್ತಾ)

ಕಂಗಳ ತೆರೆಯಲು ಸುಂದರ ರೂಪದ
ಕಿವಿಗಳ ತೆರೆಯಲು ಮೃದುಳಾಲಾಪದ—
ಸುಂದರ ಮಂಗಳ....

(ತಿರೆಯ ಕಡೆ ನೋಡಿ ಆಘ್ರಾಣಿಸಿ)

ನಲಿವ ಹಳುವು ಸೆರೆಗಳೆವೀ ಕಂಪಿನ
ಮಾಗಿಯೊಗೆದ ಮಧುಮಾಸದ ಪೆಂಪಿನ—
ಸುಂದರ ಮಂಗಳ....

(ಅಪ್ಸರೆಯರನ್ನು ನಗೆಬಗೆಯಿಂದ ನೋಡಿ ಅವರ ಹೃದಯವನ್ನು ಅರಿತಂತೆ)

ಹೃದಯತೃಷೆಗೆ ಪ್ರೇಮವ ಕರೆ ಎನುವಾ
ಬಯಲುಬಗೆಗೆ ಸ್ನೇಹವ ಬಿತ್ತೆನುವಾ
— ಸುಂದರ ಮಂಗಳ....

(ರಂಭೆಯ ಗಲ್ಲವನ್ನು ಹಿಡಿದು ಅಲುಗಿಸಿ)

ಅರಿತರಿತೆನು ಸುಂದರಿ ನಿನ್ನೊಳಗ
ಇದೊ ಹೊರಟಿಸು ನಲಿಯಲಿ ಸುರಬಳಗ—
ಸುಂದರ ಮಂಗಳ....

ಕಾಮತಪ್ತ ಚೇತನ ನಿಷ್ಕೃತಿಗೆ
ಭೋಗದೃಪ್ತ ದುರ್ಜನ ಧಿಕ್ಕೃತಿಗೆ—
ಸುಂದರ ಮಂಗಳ....

ತಾನುಸರಿಗೆ ರಾಗದ ಬೆಳಕೀಯೆ
ವಿರಸಗಾಗೆ ಸಂಸಾರದ ಮಾಯೆ—
ಸುಂದರ ಮಂಗಳ....

(ಅಂತರ್ಮುಖನಾಗಿ ತನ್ನನ್ನುದ್ದೇಶಿಸಿ)

ವಿಧಿಯು ಕನಸು ಸರಸದಿ ನನಸಾಗೆ
ಋತಧ ರೀತಿ ನೆಲೆಗೆಡದಲೆ ಸಾಗೆ—
ಸುಂದರ ಮಂಗಳ....

(ಹೊರಟುಹೋಗುವನು.)

(ಈ ತೆರೆದ ಹೊಸ ರೀತಿಯು ಮಾರನನ್ನು ಬೆರಗುಗಣ್ಣುಗಳಿಂದ ನೋಡುತ್ತಿರುವ ಅಪ್ಸರೆಯರು ಸಂತೋಷಾಧಿಕ್ಯದಿಂದ ಹಾಡುತ್ತಾರೆ.)

ಅಪ್ಸರೆಯರು

ಸುಂದರ ಮಂಗಳ ಸುಪ್ರಭಾತ
ಒಲುಮೆಗಾಯ್ತಿದೆಕೋ—ಜಗದಾ
ನಲುಮೆಗಾಯ್ತಿದೆಕೋ!

ಸ್ವರ್ಗದಿ ಸುದ್ದಿಯ ಸಾರುವ ಬನ್ನಿ
ಇಂದು ತಿರೆಗೆ ಮಂಗಳವಾಯ್ತೆನ್ನಿ
ನಂದನದಿಂ ಸುರಸುಮಗಳ ತನ್ನಿ.
ಸುಂದರ ಮಂಗಳ ಸುಪ್ರಭಾತ

ಒಲುಮೆಗಾಯ್ತಿದೆಕೋ—ಜಗದಾ
ನಲುಮೆಗಾಯ್ತಿದೆಕೋ!

(ಹಾಡುತ್ತಾ ನಿಷ್ಕ್ರಮಿಸುತ್ತಿರುವ ಅಪ್ಸರೆಯರ ಮೇಲೆ ತೆರೆ.)

## ದೃಶ್ಯ ೩

(ಹಿಮವತ್ಪರ್ವತದ ಗವಿಯೊಂದರ ಬಾಗಿಲು. ಗೌತಮನು ಒಳಗೆ ತಪಸ್ಸಿನಲ್ಲಿದ್ದಾನೆ. ಮುಂಜಾನೆಯ ನಸುಕಿನಲ್ಲಿ ಸಿದ್ಧನೊಬ್ಬನು ಪ್ರವೇಶಿಸುತ್ತಾನೆ.)

ಸಿದ್ಧ

ಬಾಳ್ಕಡಲೊಳು ಮುೞ್ ನಲ್ಮೆಯ ಕಂಡು
ಕೊನೆಗಲ್ಲೊಗೆದಾ ಪೊಲ್ಲಮೆಯುಂಡು
ನಿರೀಹರಾದವರೆಷ್ಟೋ ಮಂದಿ
ಅಣ್ಮನ ಹಿಮವಂತನ ಶರಣೊಂದಿ
ನಂಜಳಿದರ್ ನೆಮ್ಮದಿಯನು ಪಡೆದರ್
ನಚ್ಚಾನುತ ಮರಳಿರವಂ ಕಡೆದರ್
ಹೊರಗಲೆಯುವ ಪ್ರಾಣಗಳಂ ಸೆಳೆದರ್
ಹೊಳೆಗಳ ಕಡಲಂತೆದೆಯೊಳು ಹಿಡಿದರ್
ಒಳಗಿನಾಳವನು ತಾವಳೆವಂತೆ
ಆತ್ಮವಿಭೂತಿಯ ತಾವರಿವಂತೆ
ಅಮೃತಾನಂದವನೆದೆಯಿಂ ತೆಗೆವೊಲು
ಭವಪೊಡೆದೇಳುವ ಬಾಳಂ ಪಡೆವೊಲು.

ಇಂತು ಮುಕ್ತಿ ಆನಂದವನೊಂದಿ
ಸಿದ್ಧಿಯನೈದಿದರೆಷ್ಟೋ ಮಂದಿ.
ಇವರೀ ಸಾಧನೆ ಹಿಮರಾಜನಿಗೆ
ಆದರವಿಷಯಂ; ನೇಮಿಪನೆನಗೆ
ಎಡರಾಗದವೊಲು ಕಾಪಿಡಿರೆಂದು
ಸಾಫಲ್ಯದ ಬೇಹಂ ಕೊಡಿರೆಂದು,

ದಿನ ದಿನ ನೊಂದೀ ಗೌತಮಮುನಿಯಂ
ಕುರಿತೆನ್ನಂ ಬೆಸಕೈವನು ಇನಿಯಂ.

ದರಿಯುಡರಿದವಂ ಹೊರ ಬರಲಿಲ್ಲ
ಧ್ಯಾನಾಸಕ್ತಂ ಎಚ್ಚರಲಿಲ್ಲ;
ತನಗಿವನಾದನು ತಾನೆ ಸಮಾಧಿ.
ಎಂದರಿವಾನುವನಾತ್ಮವಿಬೋಧಿ?
ಅಂದಾ ದಾಕ್ಷಾಯಣಿ ಪತಿಯಂತೆ
ಇಹನೀ ಮಾಮುನಿ ಒಂದೊಗಟಂತೆ.
ಅಂಜುವೆನೀತನ ಗವಿಯಂ ಹೊಗಲು
ತವಸಿಯ ಬಗೆಯಂ ಹೊಂಚಿ ನೋಡಲು.
ಆದೊಡೆ ಮುನಿಪರಿಚರ್ಯೆಗೆ ದೊರೆಯಿಂ
ನಿಯಮಿತನಾಗಿಹನೆನ್ನಯ ಕೆಳೆಯಂ;
ಬಹುಸತ್ತ್ವನಿವಂ; ಮಾನವಮನವಂ
ಅಲ್ಲಾಗುವ ಬಗೆಬಗೆ ಸೋಜಿಗವಂ
ಅದೃಶ್ಯನಾಗಿಯೆ ನಿರುಕಿಸಬಲ್ಲಂ,
ಕೇಳಬಲ್ಲನೊಳಮೊಳಗುನ ಸೊಲ್ಲಂ.
ನನ್ನ ಪುಣ್ಯ! ಅಗೊ ಗವಿಯಿಂ ಹೊರಗೆ
ಬರುತಿಹನೀತಂ ನಾನಿಹ ಕಡೆಗೆ.

(ಮತ್ತೊಬ್ಬ ಸಿದ್ಧನು ಗೌತಮನ ಗವಿಯಿಂದ ಹೊರಕ್ಕೆ ಬರುವನು.)

ಭೋ ಭೋ ಮಿತ್ರ, ದೃಷ್ಟಿಕೊಡಿತ್ತ.

ಎರಡನೆಯ ಸಿದ್ಧ

ಓಹೋ ನೀನೇ, ಹದುಳವೆ? ಸ್ವಾಗತ.

ಮೊದಲನೆಯ ಸಿದ್ಧ

ನಾ ನೆನೆದೊಡನೆಯೇ ನೀ ತೋರಿದೆ ಮೊಗ!
ಏನು ಸುದ್ದಿ, ಮುನಿ ಏಬಗೆ, ನೇಹಿಗ?

ಎರಡನೆಯ ಸಿದ್ಧ

ವಿಷಾದಮಾನಸನಸಕ್ತಿಗಾದಂ
ವಿರಾಗಿಯಾಗುತ ದ್ವಂದ್ವವನಳಿದಂ.
ತಾವರೆಯೆಲೆ ಹನಿ ಕಾಸಾರವನು
ಈಕ್ಷಿಪ ತೆರದೊಳು ಲೋಕವನಿವನು
ತನ್ನಿಂ ಪ್ರತ್ಯೇಕಿಸಿ ನೋಡುತಿಹಂ,
ಸಾಧರ್ಮ್ಯವನಿನಿತೂ ಕಾಣದಿಹಂ.
ಭವಿಗಳಿಗಾಯಿತು ಇವನನುಕಂಪಂ
ಸತಿಯಳಲಿಗೆ ಎದೆಯೊಳು ಪ್ರತಿಕಂಪಂ.
ಆದೊಡೆ ಕರ್ಮದ ಬಂಧವನೊಲ್ಲಂ
ತನ್ನೊಳಗಿನ ಅರಕೆಯ ತಾ ಬಲ್ಲಂ.
ಹಲವು ನುಡಿಗಳಿಂದೇನು ನೇಹಿಗ—

ಕೇತು ತುಡುಕಲು ರವಿಯು, ತೆರವಾದ ತನ್ನಿರವ
ನೂರು ತಾರಗೆಕಣ್ಣ ತೆರೆದು ಹಗಲು
ನೋಡುವೊಲು, ಗೌತಮನು ತನ್ನೊಳಗ ನೋಡುವನು
ಅರಕೆ ಏನೆಂಥದಿದು ಎಂದರಿವೊಲು.

ಮೊದಲನೆಯ ಸಿದ್ಧ

ಚೆಲುವು ಮಾತು ನಿನಗೆ ಬರದೆ?
ಭವವ ಕುರಿತು ಆವ ತೆರದೆ
ಮುಂಬರಿಯಿತು ಮುನಿಯ ಚಿಂತೆ,
ಬಂದಳಾವ ಗತಿಗೆ ಕಾಂತೆ?—
ಬಿತ್ತರದೊಳು ಹೇಳು ಕೆಳೆಯ
ಬಗೆವನೆಂತು ಸಹಚರಿಯ?

ಎರಡನೆ ಸಿದ್ಧ

ಬಗೆವನೆಂತು ಸಹಚರಿಯ
ಎಂತು ಪೇಳಲೀ ಪರಿಯ?

ಮನವನೊಳಗೆ ಸಂಧಿಸುವಂ
ಪ್ರಾಣಗಳಂ ಬಂಧಿಸುವಂ
ಧ್ಯಾನ ಶಾಂತಿಗಾಗುವಂತೆ
ಕದಡು ಬಗೆಯನೊಂದಿಸುವಂ.

ಆದೊಡೇನು—
ಕಳೆಗೂಡುವ ಬಿಂಬದೊಳ್
ತೋರ್ಪ ಶಶಿ ಕಳಂಕದೊಲ್
ಮುನಿಯ ಬಗೆಯನಂಕಿಪಳಹ
ಸತಿ ಕಂಬನಿದುಂಬಿದೊಲ್.

ಎಂತಾಯಿತೊ ಈ ದುಷ್ಕೃತಿ
ಎಂತಹುದೋ ಮನು ನಿಷ್ಕೃತಿ
ಎಂದಳಲುವ ಕಾಂತೆಯಳಲ
ಹೊಳಲಿಗಾಯ್ತು ಮುನಿಯ ಮತಿ.

ನೆನೆದ ಮೊದಲ ದಿನಗಳಂ
ಆದ ತಮ್ಮ ಸೊಗಗಳಂ
ಮುನಿ ಕೃತಜ್ಞನಾಗಿ, ಹೆರಳು
ತನ್ನಳಾದ ತೆರಗಳಂ.

'ದಾರು ದಾರು ಮಥಿಸಲು
ಮೊದಲು ಬಂದ ಕಿಡಿಯೊಲು
ನಮ್ಮ ಬಾಳೊಳೊಲುಮೆಯಾಯ್ತು
ಬಳಿಕ ಹೊಗೆವ ತೆರದೊಳು.

ಅನುರಾಗದ ಕೆಂಬೆಳಕೊಳು
ಎಲ್ಲಿಡೆ ತನ್ನನೆ ಕಂಡಳು,
ಹೆರರ ನೆಚ್ಚಿ ಬಾಳ ಬಯಕೆ
ತೀರಿತೆಂದ ಮುಗುದೆ ಇವಳು.'

ಮುನಿ ಇಂತಾಲೋಚಿಸುವಂ
ಬಗೆಬಗೆ ಬನ್ನದ ಭವವಂ
ಕಾಮದ ಬಲೆಯೊಳು ಮುಲುಗುವ
ದೀನ ಮರ್ತ್ಯಜೀವಿತವಂ.

ಗಹಗಹಿಸುತ ಪುರಿಯೊಳಗೆ
ಜಗವ ನಗುವ ತೆರದೊಳಗೆ
ಭೀಮನಾಗಿ ಮಾರ ಕಾಂಬ-
ನಿವನ ವ್ಯಥಿತ ಮನದೊಳಗೆ.

ವಿಧಿಗೆಂತಿವನುಪಯೋಗಂ
ಎಂತಿವನಿಂ ಶಿವಯೋಗಂ
ಸೃಷ್ಟಿಯು ಕರ್ಮಕೆ?—ಎನ್ನುತ
ಚಿಂತಿಪನೀ ಗತರಾಗಂ.

ಒಮ್ಮೆಗೆ ತಾನಾರೆನುವಂ
ಅಹಲ್ಯೆಯೋ—ಭ್ರಮೆಗೊಳುವಂ
ತಾನಾರಿವಳಾರೆನ್ನುತ
ಆತ್ಮದ ಚಿಂತೆಗೆ ಸಲುವಂ.

ಗಹನ ತತ್ತ್ವಸಕ್ತ ಯತಿ
ಇಂತಪ್ಪನು ಭವವಿರತಿ
ಮುಂಜಾನೆಯ ಮುನ್ನಿರುಳೊಲು
ಗಹನಮುಪ್ಪುದಿವನ ಮತಿ.

ಮೊದಲನೆಯ ಸಿದ್ಧ

ಇಂತೆಯೆ ? ಮಾಮುನಿ ಸಿದ್ಧಿಯ ಹಾದಿಯ ಕಾಣ.
ತರ್ಕದಿ ತೊಳಲುವನೆಂದಿವಗಾತ್ಮಜ್ಞಾನ ?

ಎರಡನೆಯ ಸಿದ್ಧ

ಅಂತಲ್ಲವು ಸೋಜಿಗವಾಯ್ತು ವನೆಡೆಯೊಳಗೆ,
ಇರುಳರಳಿಸಿ ಬಹ ಮುಂಬೆಳಗಿನ ತೆರದೊಳಗೆ
ಇಂದಿವ ತನ್ನೊಳು ಕಂಡದ್ಭುತವೇನೆಂಬೆ !
　ನಾ ಹೇಳಲು ಇದ ನೀ ನಂಬೆ.

ಮೊದಲನೆಯ ಸಿದ್ಧ

ಓಹೋ, ನಾ ಮುನ್ನವೆ ಬಗೆದಂತಾಯಿತಿದು.
ಮುಂದೇನಾಯಿತು ಪೇಳ್ವೈ, ಮನ ತವಿಸಿಹುದು.

ಎರಡನೆಯ ಸಿದ್ಧ

ಹಿಮಗಿರಿಯೇಕಾಂತಸಮಾಧಿಯೊಳುದ್ಭವಿಸಿತು ದರ್ಶನ.
ಕಾಮೋತ್ತರಮಾದೊಲವಿನ ಸಂಭೂತಿಯ ಸಂದರ್ಶನ.

ಸೃಷ್ಟಿಯ ಮೂಲದ ತತ್ತ್ವವೆ ದನಿಗೂಡಿದ ತೆರನಾಯಿತು
ಮಂಗಳ ಮಂಜುಳ ವಾಣಿಯೊಳೆಲೆ ಮಾಮುನಿ ಕೇಳೆಂದಿತು :

"ಪ್ರೇಮಶ್ರುತಿ ಜೀವಸ್ವರ ಮೇಳನದಿಂ ಶಿವಗೀತಂ
ನಡೆವುದಲಾ ನಿರಂತರ ವಿಧಿಚಿರಹರ್ಷೋದ್ಭೂತಂ.

ಇದಕೊಂದದ ಬಾಳಿಲ್ಲವು, ಒಂದುವನಕ ಬಿಡುವಿಲ್ಲವು.
ಸ್ವಚ್ಛಂದವನುಳಿದೀ ಶ್ರುತಿಗಳಡುವುದೆ ಪುರುಳಿನಿರವು.

ತಾನ್ ತನಗಿದು ಎಂದೆನ್ನುವ ಬಾಳೊಲುಮೆಯ ಶ್ರುತಿಗೂಡದು
ರಾಗದ ಭೋಗದ ದುಃಖದ ಸಂಸ್ಕಾರಕೆ ಮೈಗೊಡುವುದು.

ತನ್ನಳಿದಿಹ ಹಿರಿಮತಿ ನೀ ತತ್ತ್ವದರ್ಶಿ ತ್ವದ್ದರ್ಶನ
ಇನ್ನು ಮುನ್ನು ಸರಸವಾಯ್ತು ನಿನ್ನಿರವೆಲೆ ನಿರಮರ್ಷಣ.

ಹಿರಿದಾಯಿತು ನಿಮ್ಮಳಲಿಂ ನನ್ನನುಭವ ವಿಧಿಯನುಭವ
ನಾವೆಳಸುವ ನವಹರ್ಷಕೆ ಹದನಾಯಿತು ನಿಮ್ಮ ಭವ.

ಬಗೆರಜವನು ನಿಡುಸುಯ್ಲಿಂ ಎದೆರಾಗವ ಕಂಬನಿಯಿಂ
ಬಾಳ್ಕಿಲುಬನು ಕಳೆದಾಯಿತು ಪರಿತಾಪದ ದಳ್ಳುರಿಯಿಂ.

ಹೊಸ ತೇಜವು ಸೋಕಿದ ಕ್ಷಣ ಮೂಡುವುದೆಮ್ಮ ಸತ್ಕೃತಿ
ವೈರಸ್ಯದಿ ನೀನಳಿಸಿದ ನಿನ್ನೊಲವಿನ ನವನಿರ್ಮಿತಿ.

ಜಗಜಗವೇ ಬಯಸುತ್ತಿದೆ ನಿಮ್ಮಿಬ್ಬರ ಸಂಗತಿಯನು
ಶಿವೆಯಂ ಶಿವನೆಂತಂತೆಯೆ ಹೊಂದೆಲೆ ಮುನಿ ನಿನ್ನೊಲವನು.

ಸಂದೆಗವುಳಿದೆಚ್ಚರು ಮುನಿ ಶ್ರುತಿಗೂಡಿದ ರಾಗದೋಲ್
ಸತಿಗೂಡುತ ಪೂರ್ಣನಾಗು ಸುಸ್ವರ ಮಂತ್ರದೋಲ್."

ಸೃಷ್ಟಿಯ ಮೂಲದ ತತ್ತ್ವವೆ ದನಿಗೂಡುತ ಇಂತೆಂದೆನೆ
ಗೌತಮ ತ್ವಜ್ಜೀವನಪೂರಣಕಾರಣಮಾಯ್ತೆಂದೆನೆ

ಸೋಜಿಗಗೊಂಡೆಚ್ಚತ್ತನು ಗೌತಮನೀ ಗಿರಿ ದರಿಯೊಳು
ತಾನ್ಮಾ ಧ್ಯಾನದೊಳುದಿಸಿದ ನನ್ನಿಯ ನಸುಕಿನ ಬೆಳಕೊಳು.

ಶಾಪಾಂತದ ನವಸಂಗಮದಾಕಾಂಕ್ಷೆಯೊಳೊಂದರೆಚಣ
ಮರಳಿಯು ಭವವೇ ತನಗೆಂದಾಶಂಕೆಯೊಳೊಂದರೆಚಣ

ಅನಾಸಕ್ತನ ಗತರಾಗನ ಬಗೆ ಉಯ್ಯಲೆಯಾಡುತಿಹುದು
ನಿರ್ಧಾರಕೆ ಸಲಲೊಲ್ಲದೆ ಎಚ್ಚತ್ತಿಹುದೆರೆಯುತಿಹುದು.

(ಗೌತಮನು ಗವಿಯುಳಿದು ಹೊರಕ್ಕೆ ಆವುದೋ ಕಣಸನ್ನು ಅರಸುವಂತೆ ಬರುವನು.)

ಎರಡನೆಯ ಸಿದ್ಧ

ಗೌತಮ ಬಹನಿಗೊ, ನಿರುಕಿಸು ನೇಹಿಗ,
　ಧ್ಯಾನಂ ಕಣಸೊಳು ಮುಗಿಯಿತೆನೆ.
ಮರೆಗಾಗುವ ಬಾ, ಅಲ್ಲಿಂ ನಿರುಕಿಪ
　ತವಸಿಯ ಮುಂದಿನ ಮಾಟವನೆ.

ಮೊದಲನೆಯ ಸಿದ್ಧ

ಅಹಹ ವಿಟ! ನೇಹಿಗ,—ಇತ್ತಲೇ ಬರುತಿಹನು
　ಗೌತಮನು ಗವಿಯುಳಿದು ನೀನೊರೆದೊಲು,
ಮೂಡ ಗವಿ ಬಾಗಿಲೊಳು ಮುಘುಮುದಿತ ಲೋಕವನು
　ಕಣಸಿನಂತೀಕ್ಷಿಸುವ ಈ ರವಿಯೊಲು.

(ಮರೆಗೆ ನಿಲ್ಲುವರು.)

ಗೌತಮ

ಬಗೆಯ ಮಲರ ಬ್ರಹ್ಮನಂತೆ
　ಧ್ಯಾನದಿಂದ ಮೂಡುತ
ಬಗೆಯೊಳಾದ ಕನಸಿನುಲಿವಿ-
　ಗಿಂತು ಹೊಳಲ ನೀಡುತ
　ದೃಷ್ಟಿಗೊಂಡ ನೀನೆಲ್ಲೈ—
　ಎಲೆ ಕಣಸೇ ನೀನೆಲ್ಲೈ ?

ಬಾಳ ಬಾಳ ಪದರ ತೆರೆದು
　ಮರುಕೊಳಿಸುತೆ ಭವವನು
ಹಗೆಯೆ ದೂರ ಸರಿದ, ಒಲಿಯೆ
　ಸನಿಯಕಾದ, ಜಗವನು
ಮನದೊಳುಯ್ಯಲಾಡಿಸುತ್ತ
　ಮಾತಿನಿಂದ ಮೋಹಿಸುತ್ತ

ದೃಷ್ಟಿಗೊಂಡ ನೀನೆಲ್ಲೈ—
ಎಲೆ ಕಣಸೇ ನೀನೆಲ್ಲೈ ?

(ತುಸಕಾಲ ಧ್ಯಾನ ಮೌನದೊಳಿದ್ದು, ಹಕ್ಕಿಗಳ ಕಲರವದಿಂದೆಚ್ಚತ್ತು ಕಿವಿ ತೆರೆದು, ಸುತ್ತಲೂ ಹರಿಯುತ್ತಿರುವ ಕೆಂಬೆಳಕಿನ ಸುಂದರ ಪ್ರಭಾತವನ್ನು ನಿರೀಕ್ಷಿಸಿ ನವಸೃಷ್ಟಿಯೊಂದನ್ನು ಕಂಡಂತೆ ಹಾಡುವನು.)

ಅಹಹ—
ಇದೆಕೊ ಬಹಿರ್ಮುಖನಾದಂ
ತವಸಿ ನಿಯತಿ ಎಂಬಂದಂ
ನಗುವ ಜಗತ್ತು ತೋರುತಿಹುದು
ನವಜನ್ಮದ ಹರ್ಷದಿ.

ಕೋಟಿಸ್ವನವೇಕಶ್ರುತಿಗುಲಿವ ಮಹಾಮೇಳದೊಲ್
ನಿರ್ಝರಗಳ ನಿಹ್ರಾದಂ ಧ್ವನಿತುಮುಲಂ ವಿಪಿನದೊಳ್.
ಇಂದುವರೆಗು ಶಿಶಿರವಿರಸ,
ಇನ್ನುಮುನ್ನು ಮಧುರಸರಸ—
ಮುಗಿದ ಸೃಷ್ಟಿಯರಳಿದೊಲ್
ಉಕ್ಕಿಬರಲು ಬದುಕು, ಪ್ರಕೃತಿ
ತನ್ನ ಚಿಪ್ಪ ಬಿರಿದವೊಲ್.

(ಹತ್ತಿರ ಹರಿಯುತ್ತಿರುವ ಹಿಮಮುಕ್ತ ನದಿಯ ಪೂರವನ್ನು ಸಹಾನುಭೂತಿಯಿಂದ ನೋಡಿ ನುಡಿಸುವಂತೆ)

ತಿರೆಯ ಹರಡುವಂತೆ ಹರಿವ ಅದ್ಯಮುಕ್ತ ಗಿರಿಧುನೀ
ಮಂಜುವೆಟ್ಟ ಕೊಟ್ಟ ಗೂಢಶಾಂತಿಯುಳಿದು ಹೊರಟೆ ನೀ.
ಇಂದುತನಕ ಹಿಮದ ಬಂಧ
ನಿನಗೆ ಮುಂದೆ ಸ್ವಚ್ಛಂದ
ನಿನ್ನ ನೀನು ಹುಡುಕುವೊಲ್
ಹರಿವೆ ದಣಿವೆ, ತಣಿಯುವೆಯಾ
ವಿಪುಳಾರ್ಣವ ಬಂಧದೊಳ್ ?

(ತನ್ನ ಹತ್ತಿರ ತಳಿತು ನಿಂತ ಮರವನ್ನು ನೋಡಿ ಸ್ನೇಹದಿಂದ)

ತನಗೆ ತಾನೆ ಸಾಕೆನ್ನುತ ಎನ್ನೊಲಿದ್ದ ಎಲೆ ತರುವೇ,
ಕೆಂದಳಿರಿನ ಸಿಂಗರವಾಂತಾವ ಬಾಳ ನೀನೆರೆವೆ?
ಮಲರ ತಳೆವೆ ದುಂಬಿ ಕರೆವೆ
ಬಂದೆಲರಿಗೆ ಕಂಪ ತೆರುವೆ
ನಿನ್ನ ಬಾಳ ಹರಡುವ್ವೋಲ್;
ಹಕ್ಕಿಹಿಂಡೆ ಬಳಿಗೆ ಸೆಳೆವೆ
ಒಂಟಿತನವ ಸಹಿಸದೋಲ್.

(ತನಗೆ ತಾನು)

ಇಂದುವರೆಗು ಸೃಷ್ಟಿಯಿತ್ತು ಆತ್ಮವಿಶ್ರಾಂತಿಯೊಳ್
ತನ್ನಷ್ಟಕೆ ತಾನು ಪೂರ್ಣವೆಂಬ ವಿಭ್ರಾಂತಿಯೊಳ್.
ಒಂದಕೊಂದು ಹಂಗ ತೋರಿ
ಮತ್ತೊಂದರ ಹಂಗ ಕೋರಿ
ಒಂದೆ ಬದುಕ ತುಂಬುವ್ವೋಲ್,
ಇಂದು ಎಲ್ಲ ಹೊಂದುತಿಹುವು
ಸೂತ್ರದಲ್ಲಿ ಕೋದವ್ವೋಲ್.

ಅಹಹ!—

ಆಡಿ ಕಾಡಿ ಬೇಡಿ ನೀಡಿ, ಒಲಿದೊ ಹಗೆದೊ ಅರಕೆಯೊಳ್
ತನ್ನ ಪೂರ್ಣತೆಯನೆ ತೋರಿ, ಹೊಂದಿ ಬಾಳ್ವ ಹರಕೆಯೊಳ್
ತನ್ನ ಬಾಳ ಮುಂಚಿ ಹರಿದು
ಮಹಾಬಂಧಕೊಂದಕೊಲಿದು
ನಡೆಯುವಂತೆ, ಸೃಷ್ಟಿಯ
ಚೋದಿಸುತಿಹ ಚೋದ್ಯಶಕ್ತಿ
ಕೊಳುತಲಿಹುದು ದೃಷ್ಟಿಯ!

(ಮನ್ಮಥನು ಈ ದೃಶ್ಯವನ್ನು ಅವರಿಸುವ ಮಧುರವಾದ ಗಾನದ ಸಾರದಂತೆ ಮೂಡುವನು—ಹಾಡುವನು.)

ಮನ್ಮಥ

ರಾಗದ ಹಂಬಲವೂ ಇರವೇ—ಅಂತೆಯೆ
ತ್ಯಾಗದ ಹಂಬಲವೂ ಇರವೇ.
ರಾಗದಿ ತುಸ ನಡೆ, ತ್ಯಾಗದಿ ತುಸ ನಡೆ.—
ಹಿರಿಯಿರವಿನ ನಲವೆಲ್ಲರ ನಿಲುಗಡೆ.
ರಾಗದ ಹಂಬಲವೂ ಇರವೇ—ಅಂತೆಯೆ
ತ್ಯಾಗದ ಹಂಬಲವೂ ಇರವೇ ‖ ಪ ‖

ತಳಿರಿನ ಬೆಡಗಿಂದಲರಿನ ಸೊಬಗಿಂ
ಖಗರುತಿಯಿಂದಳಿಕುಲ ಝುಂಕೃತಿಯಿಂ
ನಾನಿಹೆನಿದೆಕೋ ಎನ್ನುವ ವನವಿದು
ಫಲಮುಕ್ತಿಯೊಳೂ ಹಿರಿದಾಗಿಹುದೆಲೆ—
ರಾಗದ ಹಂಬಲ . . . . .

ಸುತ್ತಣ ನೀರ್‌ಸೆಳೆದೆತ್ತರಕೇರುತ
ಮತ್ತಮಾರುತನ ಹೆಪೆಯಿಂ ಹೋರುತ
ಕಡಲೇ ತಾನೆಂದೇಳ್ವುದು ಹಿರಿಯಲೆ
ಕಡಲ ಹರಹಿಗೂ ಹರಡುವ್ವದಕ್ಕೆಲೆ—
ರಾಗದ ಹಂಬಲ . . . .

ಜಗ ತನಗೆಂಬುದು ಹಿರಿಬಾಳಾಳಲು,
ತಾ ಜಗಕೆಂಬುದು ಅದನೂ ಮೀರಲು.
ಕೊಡುಕೊಳ್ಳೆನ್ನುವ ಗತಿಗಿರವಿನ ನಡೆ.
ಸಮಗತಿಯಾಗಿದರಂದವನರಿವ್ಪೊಡೆ—
ರಾಗದ ಹಂಬಲ . . . .

ಪ್ರೇಮ ಶ್ರುತಿ, ರತಿ ವಿರತಿಯೆ ತಾನಂ,
ವ್ಯಷ್ಟಿ ಸಮಷ್ಟಿ ಸ್ವರ, ಸೃಷ್ಟಿಯೆ ಗಾನಂ.
ಇಂತು ಹೊಮ್ಮುತೋ ವಿಧಿಯ ಸುಮಾನಂ,
ಇರುವಾನಂದವೆ ಇದರವಸಾನಂ.—

ರಾಗದ ಹಂಬಲವೂ ಇರವೇ—ಅಂತೆಯೆ
ತ್ಯಾಗದ ಹಂಬಲವೂ ಇರವೇ.
ರಾಗದಿ ತುಸ ನಡೆ, ತ್ಯಾಗದಿ ತುಸ ನಡೆ,—
ಅಸಂಗನಾಗಿದರಂದವನರಿವೊಡೆ
ರಾಗದ ಹಂಬಲ . . . . .

ಗೌತಮ

(ಕಂಡು ಕೇಳಿ ಭ್ರಾಂತನಾಗಿ)

ಎಂದೊ ಕೇಳಿದಂಥ ಕೊರಲು
ಸುಳಿದುಹೋದ ರೂಪವು,
ನನ್ನಿಯಂತೆ ಕಂಡ ಹೊಳಹು
ನಲ್ಮೆಯಾಲಾಪವು ;
ಕೇಳ್ವೆನಿಕೋ ಕಾಂಬೆನಿಕೋ—
ಎಲೆ ಕಣಸೇ—ನೀನಾರ್ಪೆ
ಎಲೆ ಮೋಹನ—ನೀನಾರ್ಪೆ ?

ಮದನ

(ನಗುತ್ತಾ)

ಬಾಳದುರ ಸಂಸ್ಕರಿಸಲಾದ ತಾಪವು ನಾನು
ಕಾಮಧೂಮವನುರಿಪ ಜ್ವಾಲೆ ನಾನು.
ವ್ಯಕ್ತಿಯಂ ಬ್ರಹ್ಮದೊಳು ಕರಗಿಸುವ ಕಲೆ ನಾನು
ಸೃಷ್ಟಿಯಮೃತಾನಂದ ಸ್ಫೂರ್ತಿ ನಾನು.

ಗೌತಮ

ನಾನರಿಯಲಾರದಿಹ ಮಾತಿನಿಂದೊರೆಯುತಿಹೆ
ಎಲೆ ಕಣಸೆ, ದರ್ಶನದೊಳೆನ್ನ ನೀ ಮೋಹಿಸಿಹೆ.
ಭವವ ಮೀರುವ ಮುಕ್ತಿಗೆರೆವ ಸಾಧಕ ನಾನು
ಮರುಳುಮಾತಿನ ರೂಪೆ, ನಿನಗೆನ್ನ ಹಂಗೇನು ?

ಮದನ

ಸ್ವರದ ಹಂಗುಳಿದಿರಲುಬಲ್ಲುದೇ ನಲ್ವಾಡು,
ಪ್ರೇಮಕೆರವಪ್ಪುದೇ ಜೀವಜೀವದ ಪಾಡು ?

ಗೌತಮ

ಪ್ರೇಮಕಾಮವ ಕಳೆದ ಭವವಿರತಿಯಿಂದಾನು
ಭವದ ಹಂಗುಳಿದವಗು ಈ ಪ್ರಲೋಭನವೇನು ?

ಮದನ

(ನಗುತ್ತ)

ಏನೊರೆವೆಯೊ ಮುನಿ ಮರುಳರ ಮಾತಂ
ಹೊಳಪುಳಿದಿರುವನೆ ಅನೂರುಸೂತಂ ?
ಜೀವನಧರ್ಮವೆ ಪ್ರೇಮವಪ್ಪೊಡೆ
ಅದನುಳಿದೆಲ್ಲಿದೆ ನಿನ್ನಿರವಿಗೆ ಎಡೆ ?

ಬೀಜದಿ ಹದುಗಿಹ ಮರದಾಸೆಯೊಲು
ಹರಿಯುವ ನೀರಿನ ಕಡಲಾಸೆಯೊಲು
ಎಲ್ಲ ಬಾಳೊಳೂ ಹದುಗಿದೆ ಪ್ರೇಮ
ಸಚ್ಚಿದಾನಂದ ತುಂಬುವ ಕಾಮ

ತುಸನೀರಿನ ಹೊನಲದ ಇವ ಬಿಟ್ಟು
ಹರಿವುದು ಅದಕಿದೆ ತಗ್ಗಿನ ನಿಟ್ಟು.
ನೆರೆಗೊಳ್ಳುವ ಹೊನಲಿಗೆ ಹೊರತೇನು ?—
ಎಲ್ಲವ ಮುಳುಗಿಸಿ ಹರಿವುದು ತಾನು.

ಜಗವಂ ತುಂಬುತ ಮಿಕ್ಕಿಹ ವಿಭುವಂ
ಹೊಗಲೆಳಸುವೆಯಾ ಹೇಸುತ ಭವವಂ ?
ಇನಿದಾವುದು ಮುನಿ, ಹೊರತೇನವಗೆ ?
ನಿನಗೀ ಹೊರತಿರೆ ಮುಕ್ತಿ ಏಬಗೆ ?

ಸಕ್ತಿ ಜಿಹಾಸೆಗಳೆಲ್ಲೆಯನಿತ್ತು
ಆಗುವುವಾತ್ಮದ ಬಳವಿಗೆ ಕುತ್ತು ;
ಪ್ರೇಮದ ಸಾಧನೆಯಿಂದಿವನೊತ್ತು,
ನಿನಗಪ್ಪೊಡೆ ವಿಶ್ವಾತ್ಮದ ಗೊತ್ತು.

ಧರ್ಮವ ಬಿಡು ನೀ, ಅಧರ್ಮ ಬಿಡು ನೀ,
ಸತ್ಯವನೂ ಅನೃತವನೂ ಬಿಡು ನೀ,
ಬಿಡುತೆ, ಏತರಿಂ ಬಿಡುವೆಯೊ ಬಿಡು ಅದ ;
ಇದೆ ಆನಂದವನಾವರಿಸುವ ಹದ.

ಈ ಎಡೆ ಆ ಎಡೆ ಮರುಚಣ ಬೇರೆಡೆ
ಆವ ನೇರಕೂ ಸಲ್ಲದ ಸಮನಡೆ,
ಕುಶಲ ನರ್ತಕನ ನಾಟ್ಯದ ಗತಿಯೊಲು
ಜಗದೊಳೆ ಬಾಳ್ನಡೆಗಾಗಲಿ ಹಂಬಲು.

(ಹಾಡುವನು)

ಪ್ರೇಮ ಶ್ರುತಿ, ರತಿ ವಿರತಿಯೆ ತಾನಂ,
ವ್ಯಷ್ಟಿ ಸ್ಯಷ್ಟಿ ಸ್ವರ, ಸೃಷ್ಟಿಯೆ ಗಾನಂ.
ಇಂತು ಹರಿಯಿತೋ ಶಿವದ ಸುಪಾನಂ,
ಇರುವಾನಂದವೆ ಇದರವಸಾನಂ.—

ರಾಗದ ಹಂಬಲವೂ ಇರವೇ—ಅಂತೆಯೆ
ತ್ಯಾಗದ ಹಂಬಲವೂ ಇರವೇ.
ರಾಗದಿ ತುಸ ನಡೆ. ತ್ಯಾಗದಿ ತುಸ ನಡೆ,—
ಹಿರಿಯಿರವಿನ ನಲ್ಲವೆಲ್ಲರ ನಿಲುಗಡೆ.
ರಾಗದ ಹಂಬಲ . . . . .

(ಹಾಡುತ್ತಾ ಮದನನು ಅಂತರ್ಧಾನವಾಗುವನು.)

ಗೌತಮ

(ತನಗೆ ತಾನು)

ಜಗವೆಲ್ಲವ ತುಂಬುತ ಮಿಕ್ಕಿಹಗೆ
ಹೊರತಾವುದು ಇನಿದಾವುದು ವಿಭುಗೆ ! . . .
ಸಕ್ತಿಜಿಹಾಸೆಗಳೆಲ್ಲಿಯುಳ್ಳವಂ
ವಿಶ್ವಾತ್ಮನನೆಂತೊಳಗೆ ಕೊಳ್ಳುವಂ ! . . .
ನಿದ್ದೆಯೋ—ಎಚ್ಚರವೋ,
ಇದು ಕನಸೋ—ನನಸೋ?

ನನ್ನ ಸಾಧನೆ ಮುಗಿದು ಸಿದ್ಧಿಯೈದಿದ ಪರಿಯೊ,
ನಾನೆ ಅರಿಯದ ಕಾಮು ಇಂತು ತರ್ಕಿಪ ಪರಿಯೊ?
ಕಂಡು ಕಣ್ ತಣಿಯಿತಹ, ಕೇಳಿ ಕಿವಿ ನಲಿಯಿತಹ,
ಸಂಶಯದ ಕತ್ತಲೂ ಕರಗಿ ಬೆಳಕಾಯಿತಹ! . . .

ಕರಣಗಳ ಪಳಗಿಸಿದೆ ವಿಷಯಕೆಳಸದ ರೀತಿ
ಮನವನಲೆದಾಡದೊಲು ನಿಲ್ವ ರೀತಿ,
ಬುದ್ಧಿಯುದ್ದೀಪಿಸಿದೆ ಒಳಗ ಬೆಳಗುವ ರೀತಿ,
ಎದೆಯ ತೊಳೆದೆನು ರಾಗವಳಿವ ರೀತಿ.
ಇನ್ನು ಭವಭೀತಿಯೇ!—ಭೀತಿಯಿರೆ ಮುಕ್ತಿಯೆಂ-
ತೆನ್ನ ಸಿದ್ಧಿಯ ನಿಕಷ ಜಗವಾಗಲಿ.

ಲೋಕಕರ್ತನ ದಿವ್ಯಲೀಲಾವಿಭೂತಿಯೊಳು
ಕೌಶಲದಿ ಹೊಂದಿ ನಡೆವಿರವಾಗಲಿ.
ನಲ್ಮೆಯೊಂದನೆ ಕಾಂಬ ಕುಶಲ ದೃಷ್ಟಿ,
ನೋವು ನಲವೆನ್ನದಿಹ ಪೂರ್ಣ ತುಷ್ಟಿ.

(ಹೋಗುವನು.)

ಮೊದಲನೆಯ ಸಿದ್ಧ

ಕಂಡು ಕೇಳಿದೆನಬ್ಬ ! ಅರಸರಿಗೆ ಹಿರಿ ಸುದ್ದಿ !

ಎರಡನೆಯ ಸಿದ್ಧ

ಜಗದ ಮಂಗಳಕಾಯ್ತು ಗೌತಮನ ಈ ಸಿದ್ಧಿ.

ತೆರೆ

# ಉತ್ತರಾಂಕ

## ದೃಶ್ಯ ೧

(ಮಿಥಿಲೆಯ ಬನದ ಒಂದು ಹಾದಿ. ಮೈತ್ರೇಯನ ಆಶ್ರಮದ ವಟುಗಳು ದರ್ಭೆ ಮತ್ತು ಸಮಿತ್ತಿನ ಹೊರೆಗಳನ್ನು ಹೊತ್ತುಕೊಂಡು ಪ್ರವೇಶಿಸುತ್ತಾರೆ.)

ಒಬ್ಬ

ಹೊಂಗೆಯ ಮರ ಚೆಂದ, ಮಂಗನಾಟವು ಚೆಂದ
ಸಂಗಡವಿರೆ ನೀ ಬಲು ಚೆಂದ—

(ಹೊರೆಯನ್ನು ಎತ್ತಿಹಾಕಿ ಹೊಂಗೆಯ ಮರದ ನೆರಳಿನಲ್ಲಿ ಮಲಗುವುದಕ್ಕೆ ಅಣಿಯಾಗುತ್ತಾ)

ಸಂಗಡವಿರೆ ನೀ ಬಲು ಚೆಂದ—ನೆಳಲೊಳು
ಅಂಗಾತ ಮಲಗೆ ಬಲು ಚೆಂದ.

(ಇನ್ನೊಬ್ಬ ತಾನೂ ಹಾಗೆ ಮಾಡಿ)

ವೇದ ಕಲಿಯಲು ಹೋದ ಹೈದನ ಕತೆ ಕೇಳಾ
ಐದ್ಹಟ್ಟಿ ತುರುವ ಹಳುವೊಳು—ಕಾಯುತ್ತ
ಓದಾಯ್ತು ಎಂದ ವನದೊಳು.

ಒಬ್ಬ

ಹೊಂಗೆಯ ನೆಳಲೊಳು ಅಂಗಾತ ಬಿದ್ದವನೆ
ಹಂಗಿಲ್ಲದೆ ವಿದ್ಯೆ ಕಲಿವನೆ—ನನ ಕೆಳೆಯ
ಸಂಗಡಲೆ ಇಹಳೊ ಸರಸತಿ.

ಇನ್ನೊಬ್ಬ

ಪರರ ಜರೆದೊಡೆ ನಿನಗೆ ನರಕ ತಪ್ಪದು ಕಾಣೊ
ಗುರುವಾಕ್ಯ ನೆನೆಯೊ ನೇಹಿಗನೆ—ದರ್ಭೆಯ
ಹೊರೆಯೆತ್ತಿ ನಡೆಯೋ ಮುನಿದಾರು.

ಒಬ್ಬ

ಹೊತ್ತಾರೆ ತುರುವಟ್ಟೆ ಇತ್ತಲೆ ಹೋದವರು
ನೆತ್ತಿಗೇರಿದರು ದಿನದೇವ—ಗೆಳೆಯರು
ಎತ್ತ ಹೋಗಿಹರೊ ಬರಲಿಲ್ಲ.

ಇನ್ನೊಬ್ಬ

(ಎದ್ದು ಕುಳಿತು)

ಧೌಡುಧೌಡೆನ್ನುತ್ತ ಓಡೋಡಿ ಬಹರಾರು
ಕಾಡ ಹುಲಿ ಬೆಂಬತ್ತಿ ಬಂದಂತೆ—ಬರುವರ
ನೋಡಣ್ಣ ನಮ್ಮ ಗೆಳೆಯರ.

(ಮತ್ತಿಬ್ಬರು ವಟುಗಳು ಏದಿಕೊಂಡು ಓಡಿಬರುತ್ತಾರೆ.)

ಬಂದವರು

ಕಂಡೆವು!

ಮೊದಲನೆಯ ವಟು

ಏನನು?

ಬಂದವರು

ಕಂಡೆವು ಕಂಡೆವು!

ಎರಡನೆಯವನು

ಏನನೊ?

ಬಂದವರು

ಕಂಡೆವು ಕಂಡೆವು ವಿಶ್ವಾಮಿತ್ರರ
ಆ ಆಶ್ರಮದೆಡೆ ಇದೆ ಈಗ
ಹವಿ ಹೊಗೆಗೂಡಿದ ಅಗ್ನಿಯ ತೆರದೊಳು
ಜಡೆಗೊಂಡಾತನ ಮೊಗವೀಗ!

ಮೊದಲ ವಟುಗಳು

ಮಹರ್ಷಿ ಕೌಶಿಕರೈತಂದಿಹರೇ,
ಅವರನು ಬಲ್ಲಿರಾ—ಇದು ದಿಟವೇ ?

ಬಂದವರು

ದಿಟ ದಿಟ, ಮುನಿಗಳನರಿಯೆವೆ !—ನಡೆಯಿರಿ
ಗುರುಗಳಿಗರುಹುವ ಈ ಕ್ಷಣವೇ.

(ಎಲ್ಲರೂ ಹೋಗುವರು.)

ತೆರೆ

## ದೃಶ್ಯ ೨

(ತೆರೆ ಎದ್ದು ಮೈತ್ರೇಯನ ಆಶ್ರಮದ ಒಂದು ಭಾಗವನ್ನು ತೋರಿಸುವುದು. ಮಾಧ್ಯಾಹ್ನಿಕವನ್ನು ಪೂರೈಸಿಕೊಂಡು ಮೈತ್ರೇಯ ಕೌಶಿಕರು ಆಶ್ರಮಕ್ಕೆ ಬರುತ್ತಿರುವಾಗ—)

ಮೈತ್ರೇಯ

ಅಹಹ ದಿನದ ಚೆಲುವೆನಿತು
ಎಂದೂ ಕಾಣೆ ಸೊಗವಿನಿತು ॥ ಪ ॥

ರವಿ ಹೊಳೆವನು ತಿಳಿನೀಲವ
ಹೊಸ ಹೊಗರಿಂದಭಿಷೇಚಿಸಿ
ತಳಿರೊಡೆದಿಹ ಮಲರಿಡಿದಿಹ
ಬನದ ಚೆಲುವನವಲೋಕಿಸಿ ॥ ಅಹಹ ದಿನದ...,

ಸಿರಿಮೌನದ ಕುಸುರಿನಂತೆ
ಖಗದಿಂಚರ ವನದಂಚೊಳು
ನಾನಾಲಿಸೆ ಸವಿನೆನಪನೆ
ತರುತಿರುವುದು ಬಗೆಯಂಚೊಳು ॥ ಅಹಹ ದಿನದ....

ನನ್ನಾಲಿಗಳರಸುತ್ತಿವೆ
ಈ ದಂಪತಿ ಇಲ್ಲಿಹರೆನೆ
ದೆಸೆದೆಸೆಗಳ ನಿಟ್ಟಿಸುತಲಿ
ಹಿಂದಾದುದು ಬರಿ ಕನಸೆನೆ ॥ ಅಹಹ ದಿನದ....

ನೋಡಾ ತರು ನಾಣೇರಿದ
ವಧುವಿನಂತೆ ಅದರಡಿಯೊಳು
ಭ್ರಮಿಸುವೆ ನಾ ನವದಂಪತಿ
ನುಡಿದಾಡುವರೆನ್ನುವವೊಲು ॥ ಅಹಹ ದಿನದ....

ಚಣ ಚಣಕೂ ಕಿವಿ ತೆರೆವುದು
ಗೌತಮನಿವನೆಂದಾಲಿಸಿ
ಬರಿ ಭ್ರಮೆ ಇದು ಹುಸಿ ಎನ್ನುವ
ನಂಬಿಕೆಯನೆ ಹುಸಿ ಎನ್ನಿಸಿ || ಅಹಹ ದಿನದ....

ಅದೆ ಬಾನದೆ ಬೆಳಕಾ ರಸ-
ದನುಭೂತಿಯು ಪಡೆದಿದೆ ಮನ
ಮೊದಲೊಲಿದರ ಮುದಮುದ್ರಿತ-
ವಾದಾ ದಿನದಂತೀ ದಿನ || ಅಹಹ ದಿನದ....

ಕೌಶಿಕ

ಪ್ರಿಯದರ್ಶನವಾದೀ ಜಗ
ಪ್ರಿಯದರ್ಶನಕಾಗದಿಹುದೆ?
ಶಾಪಾಂತ್ಯದ ಪುನರಾಗಮ-
ನಾಕಾಂಕ್ಷೆಯೊಳಿದೆ ನನ್ನೆದೆ || ಅಹಹ ದಿನದ....

ಮಾಧವಿ

(ಸಂಭ್ರಮದಿಂದ ಪ್ರವೇಶಿಸಿ)

ಆಲಿಸು ಕೌಶಿಕ, ಹಳುವಿಂದೈತಂ-
  ದೀ ವಟುಗಳ ಬೇಹ.
ಶುಭಶುಭವೆನ್ನುತೆ ನನ್ನೆದೆ ನುಡಿಯಿತು—
  ಆಲಿಸಿರೀ ಬೇಹ.

ಮೈತ್ರೇಯ

ಏನದು ವಟುಗಳೆ?

ವಟುಗಳು

ಕ್ಷಮಿಸಿರಾರ್ಯ. ತುಸವೆಚ್ಚರ ತಪ್ಪಿರೆ
ತುರು ಓಡಿದುವು ಹಳುವಿನ ದಾರಿ;

ಅವನರಸುತ ನಾವೈದಿದೆವಲ್ಲಿಗೆ
ನಿಮ್ಮಂಕೆಯ ಮಿೀರಿ.

ಕೌಶಿಕ

(ಆ ಹುಡುಗನ ಬೆನ್ನುತಟ್ಟಿ ನಗುತ್ತ)

ಆಟದ ಹಂಬಲು ನಿಮಗಿರೆ, ಓಟದ
ಹಂಬಲು ತುರುಗಾಯ್ತು.
ಕ್ಷಮಿಸಿಹರಿದ ಗುರು; ಹಳುವೊಳು ಏನಂ
ಕಂಡಿರಿ, ಏನಾಯ್ತು?

ವಟುಗಳು

ತರುವೇರಿರೆ ನಾವಡಿಯೊಳೆ ಕಂಡೆವು
ವಿಶ್ವಾಮಿತ್ರರ ಇದೆ ಈಗ;
ಹವಿಹೊಗೆಗೂಡಿದ ಅಗ್ನಿಯ ತೆರದೊಳು
ಜಡೆಗೊಂಡಾತನ ಮೊಗವೀಗ.

(ಎಲ್ಲರೂ ಸಂಭ್ರಾಂತರಾಗುವರು.)

ಅವರೊಡನಿದ್ದರು ಇಬ್ಬರು ವಟುಗಳು,
ಏನೆಂದೊರೆವೆವು ಅವರಂದ!—
ತಾವರೆಯೆಸಳಿನ ನೀಟದ ಮಾಟದ
ಕಂಗಳು, ಚಂದ್ರಗು ಮೊಗ ಚೆಂದ;
ಗೂಳಿಯ ಹಿಣಿಲಂತಿರೆ ಹೆಗಲವರಿಗೆ.
ಮಂಡಿಯ ಮುಟ್ಟುವ ತೋಳ್ದಿಂಡು,
ಆ ಎಡೆಹರಹೋ ವಿಧಿ ಮಾಡಿದನೆನೆ
ನಿಲ್ಲಲು ಪೌರುಷವೆಡೆಗೊಂಡು;
ಸಿಂಹದ ಠೀವಿಯು ಗಜಗಾಂಭೀರ್ಯದ
ನಡೆ, ಕಣ್ತುಂಬುವ ಮೈಕಟ್ಟು,

ಎಳಹರೆಯದ ನಿಗಿನಗುವೊಗ; ಆಹಾ
ಕಂಡೆವೆ? ಉಹು—ಇದು ಕಣ್ಕಟ್ಟು!

ಕಂಡೆವು ಕಂಡೆವು ಕೌಶಿಕತಪಸಿಯು
ಆ ಆಶ್ರಮದೆಡೆ ಇದೆ ಈಗ!
ಅವರುರುತಪವೇ ನಡೆಗೊಂಡುದೊ ಎನೆ
ಸೋಜಿಗದಾ ವಟುಗಳನೀಗ!

ಮೈತ್ರೇಯ

ಮಿಥಿಲಾನಗರಕೆ ಹಾದಿ ಇದಲ್ಲವು
ಕೌಶಿಕರ್ಗೈತಹ ಪರಿ ಏನೋ.
ಗೌತಮನೊರೆದಾ ಶಾಪದ ಮುಗಿವಿಗೆ
ಇವರೀ ಬರವೇ ಹದನೇನೋ.

ಎಂತಿರಲೀ ಪರಿ—ಮಂಗಳವೆನ್ನಿರಿ:
ತವಮ್ಮಾ, ಕೌಶಿಕ, ನಡೆ ಮುಂದೆ.
ನಮ್ಮಾಶ್ರಮದೊಳು ಆತಿಥ್ಯವ ಕೊಳೆ
ಅಭ್ಯರ್ಥಿಪ ನಾವವರಿಂದೆ.

ತೆರೆ

## ದೃಶ್ಯ ೩

(ಗೌತಮಾಶ್ರಮ. ರಾಮಲಕ್ಷ್ಮಣಸಮೇತನಾಗಿ ವಿಶ್ವಾಮಿತ್ರನು ಪ್ರವೇಶಿಸುತ್ತಾನೆ.)

ವಿಶ್ವಾಮಿತ್ರ

ವತ್ಸ ರಾಮಾ ವತ್ಸ ಲಕ್ಷ್ಮಣ,
ಬಂದೆನೆಮ್ಮಯ ಪಯಣದಂತಕೆ.
ಅತ್ತ ನೋಡಿರಿ, ಪಡುವ ದೆಸೆಯೆಡೆ
ಸುತ್ತಣಾಶ್ರಮವನದ ನಡುಗಡೆ
ನಿಯಮರಕ್ಷಿತ ಧರ್ಮದಂದದಿ
ಮೆರೆವ ಹೊಳಲೇ ಮಿಥಿಲೆಯು.

ರಾಮ

ಜನಕರಾಯನ ನಗರ ಇದುವೆ?
ಅಯ್ಯನಾಳುವ ನಮ್ಮಯೋಧ್ಯೆಯ
ಕಂಡ ತೆರದೊಳು ಮನಕೆ ಸಂತಸ-
ವಾಗುತಿರುವುದು ಲಕ್ಷ್ಮಣಾ!

ಲಕ್ಷ್ಮಣ

ಅಹುದು ಅಣ್ಣಾ ಅಹುದು! ನನಗೂ
ನೂರು ಕಳಸನ ಮೆರೆಸುತಿರುವೀ
ಹೊಳಲು ಹರುಷವ ಬೀರುತಿಹುದೈ
ನಮ್ಮ ನಗರದ ತೆರದೊಳು.

ವಿಶ್ವಾಮಿತ್ರ

ಕುಲದಿಂ ಶೀಲದಿ ಧರ್ಮದಾಳ್ವಿಯೊಳು
ಅಂತೆಯೆ ಜಸದೊಳು ದಶರಥಗೆ

ಸಾಟಿಯೆನಿಸುವೀ ರಾಜರ್ಷಿಯ ಪುರ
ತಕ್ಕುದು ನಿಮ್ಮಯ ಭಾವನೆಗೆ.
ದಣಿದಿರಿ ಮಕ್ಕಳೆ, ಹಳುವಿನ ಹಾದಿಯ
ಸರಿಹೊತ್ತಿನವರೆ ನಡೆನಡೆದು ;
ತೋಪೊಳು ಬಿಡುವಂ ಕೊಳ್ಳಿರಿ ಬರುವೆನು
ಧ್ಯಾನದ ನೇಮವ ನಾ ನಡೆದು.

(ಹೋಗುವನು.)

ಲಕ್ಷ್ಮಣ

ದಿನದಿನ ನಾವಲೆದಾಡಿದ ಕುರುಚಲ ಕಾಡೆತ್ತ,
ನಿಡು ಬೆಳೆದಿಹ ಹೆಮ್ಮರದೀ ತೋಪಿನ ತೆರನೆತ್ತ!
ನೋಡೈ ಅಣ್ಣಾ, ಬಾನನೆ ವಾಮನನಡಿಯಂತೆ
ಅಳೆದಿಹುದೀ ತರುವೊಂದೇ ನೋಟವೆ ಸೋಲ್ವಂತೆ

ನೀನೆನ್ನುತ ತಾನೆನ್ನುತ ಹೋರದೆ ಅನುವರಿತು
ಗಿಡುಮರಗಳು ಬಾಳುತ್ತಿವೆ ನಲ್ಮೆಯ ಹವಣರಿತು :
ಮೆಳೆಗುತ್ತಿಯ ನೈಷ್ಕರ್ಮ್ಯದ ಜೀವನವಿಲ್ಲಿಲ್ಲಿ ;
ತುಂಬಿದ ಬಾಳ್ವೆಯ ಸಂತಸ ಹೊರಹೊಮ್ಮಿದೆ ಇಲ್ಲಿ.

ನಡುಗಿಡದೊಳು ನಡುಗುತ್ತಿಹ ಹೊಗಭಯುವ ನೀಡಿ
ನೆಲದಗಲಕು ಹರಡಿರುವೀ ಗರುಕೆಯ ಕಣ್ಮೋಡಿ,
ಬನದೆಲೆಯೀ ಕಿವಿಸವಿದನಿ, ಕುಂಜದ ಖಗದುಲಿವು
ಬಗೆಗಾವುದೊ ವಿಶ್ರಾಂತಿಯ ಭಾವವ ತಂದಿಹುವು.

ಕಣ್ಮನಗಳ ತರ್ಪಿಸುವೀ ಬನದೇವಿಯ ಸಿರಿಗೆ
ಮಣಿಯಿತು ಬಗೆ; ಅಳಲಾಯಿತು ನೆನಪಿನ ತೆರೆಮರೆಗೆ.
ಆದೊಡೆ ಅಣ್ಣಾ, ನೀನೋ ನನ್ನುತ್ಸಾಹದೊಳು
ಬೆರೆಯದೆ ದೂರದ ಮನದಿಂ ನಿಂತಿಹೆ ಚಿಂತೆಯೊಳು !

ರಾಮ

ನಿಟ ತಮ್ಮಾ ನಿಟ ಲಕ್ಷ್ಮಣ, ಬನ ಸುಂದರವಹುದು;
ದಣಿದಿಹ ದಾರಿಗಮುಂದಿಗೆ ಸೊಗವಂ ತರಲಹುದು.
ಆದೊಡೆ ನನಗಿದು ಸೋಜಿಗ—ನಿರ್ಜನವೀ ತಾಣ
ಧ್ಯಾನಾಧ್ಯಯನಾಸಕ್ತ ಜನಾವಾಸವಿಹೀನ!

ಸ್ನಾನಕು ನೇಮಕು ತಕ್ಕುದು ನೆರೆಯೀ ತಿಳಿವೊನಲು,
ಪಾಠಪ್ರವಚನಕಾದುದು ತೋಪಿನ ತಣ್ಣೆಳಲು,
ಮೇಣಿದದೂರಗ್ರಾಮ, ತೃಣಕಾಷ್ಠಸಮೃದ್ಧ;
ಇಂತಿದ್ದರು ಏ ಕತಮಾಯ್ತಿದು ವಿಪ್ರನಿಷಿದ್ಧ?

ಆಗೊ ಆ ಎಡೆ ಬಿಟ್ಟಿಲೆಸನೆ ಎಂತಿಳೆಗೊರಗಿಹುದು
ತರುತಲದೀ ವೇದಿಕೆಯೂ ನೆಲಸಮ ಕುಸಿದಿಹುದು:
ಪಿಂತಿದು ಮುನಿಜನಸೇವಿತಮಿದು ನಿಸ್ಸಂದೇಹ;
ಇಂದಾದೊಡೆ ಎನಗೆನಿಪುದು ಇದು ಗಾಳಿಯ ಗೇಹ.

ತಪಸ್ವಿತ್ಮರ ನಿಡುಸುಯ್ಯಲು ಈ ಬನದೆಲೆಹುಯಿಲು,
ದುಃಖಿಗಳಾರ್ತಾಕ್ರಂದನವೀ ಕೋಕಿಲ ಕುಕಿಲು;
ಈ ಹಳುವಿನ ಮರೆಗಾರೊ ಪೊರೆ ಪೊರೆ ಶರಣೆಂದು
ಮೌನದೊಳೆನ್ನೆರೆವಂತಿದೆ ನನ್ನಯ ಕಿವಿಗಿಂದು.

ಲಕ್ಷ್ಮಣ

(ಹುಸಿನಗೆಗೊಂಡು)

ತಾಟಕೆಯನು ಕೊಂದಾಮೊದಲಣ್ಣಾ, ನಿನ್ನ ಮನ
ಸ್ವಾಸ್ಥ್ಯವನುಳಿದಿಂತಾಯಿತು ದುಶ್ಚಿಂತಾಸದನ.
ಕುಸಿದೆಲೆಸನೆ ಈ ಕಾಡೊಳವೇಂ ನಿತ್ಯದ ನೋಟ,
ಅವಕೀ ಪರಿ ಪರಿಭಾವಿಸೆ ಅದು ಹುಸಿಬಗೆಯಾಟ.

ಇದಮಂಗಳವಾಗಿದ್ದೊಡೆ ಎಚ್ಚರಿಕೆಯು ಕೊಡದೆ
ಕರೆತರುತಿದ್ದರೆ ನಮ್ಮನು ಮುನಿವರರೀ ತೆರದೆ?
ಎಂತಿದ್ದರು ಇರಲೀ ಪರಿ; ಈ ಬನದೇವತೆಗೆ
ಶರಣೆಂದೆನ್ನುತೆ ಬಿಡುವಂ ಕೊಳುವುದೆ ತರವೆನುಗೆ.

ರಾಮ

ನಿನ್ನಿಚ್ಛೆಯು ತೆರನಾಗಲಿ ಲಕ್ಷ್ಮಣ, ಮಚ್ಚಿತ್ತ
ವಿಭ್ರಾಂತಿಗೆ ಸಿಲುಕಿರಬಹುದಾ ದುಗುಡ ನಿಮಿತ್ತ.
ಬಿಡುವಂ ಕೊಳ್ಳುವ ನೆಲಲೊಳು ಮುನಿಯೈತಹನರೆಗೆ
ಮಲರರ್ಘ್ಯವ ಸಲಿಸುತಲೀ ಬನಸಿರಿ ದೇವತೆಗೆ.

(ಪುಷ್ಪವನ್ನು ಆರಿಸುತ್ತಿರುವರು.)

(ತೆರೆಯ ಮರೆಯಲ್ಲಿ ಅದೃಶ್ಯಳಾದ ಅಹಲ್ಯೆ ಅಮಾನುಷವೂ ದೀನವೂ ಸ್ಪಷ್ಟಾಸ್ಪಷ್ಟವೂ ಆದ ವಾಣಿಯಿಂದ ಹಾಡುವಳು.)

ಅಹಲ್ಯೆ

ಕೆಟ್ಟೆನಲಾ ಕೆಟ್ಟೆನಲಾ ಒಲವೇ ಒಲವೇ
ಸುಟ್ಟೆಯಲಾ ಸುಟ್ಟೆಯಲಾ ನಲವೇ ನಲವೇ
ಗಾಳಿಯು ತೆರನಾದೆನಲಾ
ಈ ಬಾಳಂ ಬಾಳೆನಲಾ
ಹಾ ನಲವೇ ಒಲವೇ—

ರಾಮ

(ಆಲಿಸಿ, ಭ್ರಾಂತನಾಗಿ)

ಲಕ್ಷ್ಮಣಾ,
ಅತ್ತ ಗುತ್ತಿಯ ಸನಿಯ
ಆಲಿಸಾಲಿಸು ದನಿಯ!

ಲಕ್ಷ್ಮಣ

ಏನು ದನಿಯದು, ಎತ್ತ?

ಅಹಲ್ಯೆ

ರವಿ ಬೆಳಗದ ತಿರೆ ಧರಿಸದ
ಎಲರೂ ಸೋಕದ ಬದುಕು
ಇರವಿಲ್ಲದ ಸಾವೊಲ್ಲದ
ಬರಿಬರಿ ಅಳಲಿನ ನಸುಕು
ವಿಶ್ವಕೆ ನಾನೇಕಾಕಿನಿ
ಪಾತಕಿ ಅಯ್ಯೋ ಶಾಕಿನಿ
ಅಸತಿ ಅನಾತ್ಮೆ ಭ್ರಷ್ಟೆ ಹೇಸಿಕೆ ಎಲ್ಲರ ಮನಕು || ಕೆಟ್ಟೆನಲಾ....

ರಾಮ

ಕೇಳಿತೇ ಲಕ್ಷ್ಮಣ?

ಲಕ್ಷ್ಮಣ

ಏನೇಳ್ವೆನೀ ಭ್ರಮೆಗೆ! ಗಾಳಿ ಕಿರುಗುಟ್ಟಿದರೆ
ಏನನೋ ಭಾವಿಸುತ ಇಂತಳಲಿಗಪ್ಪರೆ?

(ರಾಮನು ಲಕ್ಷ್ಮಣನ ಮಾತನ್ನು ಆಲಿಸದವನಂತೆ ಕಿವಿಯನ್ನು ಅತ್ತ ತೆರೆಯುವನು.)

ಅಹಲ್ಯೆ

ಇಂಧನವುಳಿದಳಿಪೊಗೆಯುನೆ
ನೆಮ್ಮುವ ಉರಿಯಂತೆ
ಕಾಮುಕ ದೇವನ ವಿಭ್ರಮು-
ಕಾದೆನು ನಾನಿಂತೆ
ಹೂವೆಂದುದೆ ಹಾವಾಯಿತು
ಕಾವ್ರದೆ ನನ್ನಂ ಕೊಂದಿತು
ಪಳಿ ಒಲವೇ ಹುಸಿ ನಲವೇ ಹಾ ನಿರಂತ ಚಿಂತೆ || ಕೆಟ್ಟೆನಲಾ....

ಲಕ್ಷ್ಮಣ

ಕೌತುಕದ ನಾದಗಳ ಬೀಡಣ್ಣ ಈ ಕಾಡು;
ಮನುಜರಳುವನೆ ಪೋಲ್ತುದೀ ಬಿದಿರಮೆಳೆ ಹಾಡು !

ಅಹಲ್ಯೆ

ನನ್ನೆದೆಯನೆ ನಾನರಿಯದೆ
ನಡೆಯಂ ಮೀರಿದೆನೇ
ಹುಲುಬಯಕೆಯ ತುಸ ರಾಗಕೆ
ನನ್ನನೆ ಮಾರಿದೆನೇ
ನಾ ಬೆಂದೆನೆ ಬಯಲಾದೆನೆ
ನೆನೆದೆಡೆ ಮೈಲಿಗೆಯಾದೆನೆ
ಮಾಮುನಿಸತಿಗೀ ಬಾಳೇ ಹಾ ಮುಂಗತಿ ಕಾಣೆ॥ ಕೆಟ್ಟೆನಲಾ....

ಲಕ್ಷ್ಮಣ

ಕಣ್ ಕಾಣದು ಕಿವಿಯಾಲಿಪು-
ದೇನೀ ಭ್ರಾಂತಿ ಇದು ?
ನಮ್ಮನು ವಂಚಿಸಲೀ ತೆರ
ರಕ್ಕಸಮಾಯೆಯಿದು !
ಏನೋ ಹುಯಿಲೇನೋ ದನಿ,
ಅರಿಯದು ಇದರೊಳಗು.

(ರಾಮನು ಪರವಶತೆಯಿಂದ ಧ್ವನಿಯ ಕಡೆ ತೆರೆಯ ಮರೆಗೆ ಹೋಗುವನು.)

ತುಸ ತಡೆ ರಾಮಾ, ಮಾಮುನಿ
ಐತಹವರೆಗು.

ವಿಶ್ವಾಮಿತ್ರ

(ಪ್ರವೇಶಿಸಿ)

ಏನಾಯಿತು ಸೌಮಿತ್ರಿ ?

ಲಕ್ಷ್ಮಣ

ಗಾಳಿ ಗೋಳಿಡುತಿಹುದು ಈ ಹಳುವಿನೊಳಗೆ,
ಬೇಡವೆಂದರು ಹೋದ ರಾಮನತ್ತೆಡೆಗೆ,
ಆಲಿಸಿರಿ ಮುನಿವರಾ, ಹೃದ್ವಿದಾರಿಣಿ ವಾಣಿ
ಶ್ರೋತ್ರಗೋಚರವಾಗಲಿಲ್ಲವೇ ಈ ವಾಣಿ?

ಅಹಲ್ಯೆ

ಉಸಿರಳಿಯುವೆ ನಾನೆಂದಿಗೆ
ಮಾನಿಸರಂತೆ
ಪಳಿಯುಳಿಯುವೆ ನಾನೆಂದಿಗೆ
ನೀಗುತ ಚಿಂತೆ
ಕೊನೆ ಎಂದಿಗೆ ಈ ಶಾಪಕೆ
ತಂಪೆಂದಿಗೆ ಈ ತಾಪಕೆ
ಸೊಗವಡೆವಳು ಇನ್ನೆಂದಿಗೆ ಗೌತಮ ಕಾಂತೆ || ಕೆಟ್ಟಿನಲಾ....

ವಿಶ್ವಾಮಿತ್ರ

ನನ್ನ ಸಖ ಗೌತಮನ ಪುಣ್ಯಮಯಿ ಸತಿ ಈಕೆ
ಕೃತಕರ್ಮನಿಷ್ಕೃತಿಗೆ ಪರಿತಪಿಪಳಿಂತು ;
ಅನುತಾಪವರಸುತ್ತ ಕಾಡಲೆಯುವೀ ಗೋಳ-
ನಾಲಿಸುತ ನನ್ನೆದೆಯು ಕರಗುತಿಹುದೆಂತು !
ಕಳವಳವ ಕೊಳ್ಳದಿರು ಸೌಮಿತ್ರಿ, ಶುಭವಹುದು.

(ರಾಮ ಹೋದ ಕಡೆಯನ್ನು ನೋಡಿ)

ನಡೆ ರಾಮ, ಮರುಕದಿಂ ಸ್ನಾತಾಂತರಂಗದಿಂ-
ದಾರ್ತರುತ್ತರಣಕ್ಕೆ ತಕ್ಕನಾದೆ.
ತೇಜೋಭಿರಾಮನೇ—ನಡೆ, ವೇಳೆಯೊದಗಿಹುದು
ಧೂತಕಲ್ಮಷೆ ತನ್ನ ಬಾಳನೈದೆ.

(ವಿಶ್ವಾಮಿತ್ರನು ಅಂತರ್ಮುಖನಾಗಿ ಆವುದೋ ಮಂತ್ರವನ್ನು ಜಪಿಸುತ್ತ ತೆರೆಯ ಮರೆಗೆ ಹೋಗುವನು. ಲಕ್ಷ್ಮಣನು ಆತನನ್ನು ಹಿಂಬಾಲಿಸುವನು. ಆತನು ಅತ್ತ ಹೋಗಲು ಇತ್ತ ರಂಭೆ ಮೊದಲಾದ ಅಪ್ಸರೆಯರು ಬರುವರು. ಕರುಣಾಜನಕವಾದ ಮೇಳದ ಸಂಗೀತವು ಕ್ರಮೇಣ ಗೆಲವಿನ ರಾಗಕ್ಕೆ ತಿರುಗುವುದು.)

ರಂಭೆ

ನೋಡಿ ಸಖಿಯರೆ ನೋಡಿರೇ ಅಹ
ಕೂಡುತಿರುವಚ್ಚರಿಯನು—ಅಹ
ಮೂಡಿ ಬರುವಚ್ಚರಿಯನು—
ದನಿಯನಾಲಿಸಿ ನಿಲ್ವನೊಮ್ಮೆಗೆ
ಧೀರ ಮುಂದಕೆ ನಡೆವನು—ನೆನೆ-
ದಿಪ್ಪ ದೈವವನೆರೆವನು
ಕಾಳಮೇಘವ ಹೊಗುವ ರವಿಯೊಲು
ಪಾಳುಗುಡಿಸಲ ಹೊಗುವನು—ಮೇ-
ಣೆಮ್ಮ ದೃಷ್ಟಿಯ ಮಿಗುವನು

ಮತ್ತೊಬ್ಬಳು

ಮುಗಿಲಿನೊಳತೆರೆ ತೆರೆದ ರೀತಿಗೆ
ಗುಡಿಸಲೊಳಗೆಂತಾಯಿತೇ—ಆ
ಕಾಳವೆಂತಹ ಮಾಗಿತೇ
ಇರುಳ ಹಳುವೊಳು ನಸುಕು ನಮೆವಾ
ಹಗಲ ಹಾದಿಯೊಲಾಯಿತೇ—ಅಗೊ
ಬಲಿನ ಬೆಳಕದು ತೋರಿತೇ!

ಮತ್ತೊಬ್ಬಳು

ಏನು ಸೋಜಿಗ ಮೂಡಿ ಬರುವೀ
ರೂಪವೊಂದನು ನೋಡಿರೇ—ಎಂ-
ದಿಲ್ಲದದ್ಭುತ ಕಾಣಿರೇ

ಹೊಗೆಯು ಮುಸುಕಿಂದೊಗೆವ ಅಗ್ನಿಯು
ಶಿಖೆಯು ತೆರದೊಳು ಜ್ವಲಿಸುವೀ—ನನ
ನೇತ್ರಜಾಡ್ಯವ ಹರಿಸುವೀ.

ಇನ್ನೊಬ್ಬಳು

ಹರಿವ ಹೊನಲೊಳು ಕಣ್ಣು ಕುಕ್ಕುವ
ರವಿಯ ನೀಟದ ಬಿಂಬದೊಲ್—ಬರಿ
ಬೆಳಕೆ ಮೈಯನು ತುಂಬಿದೊಲ್
ದೇವದೇವರೆ ನೋಡೆ ಹಿಂಜರಿ-
ವಂಥ ಚೆಲುವಿನ ಓಜದೊಳ್—ಬಲ್
ತಪದ ದುರ್ಭರ ತೇಜದೊಳ್.

ರಂಭೆ

ದಿವ್ಯದರ್ಶನ ದಿವ್ಯದರ್ಶನ
ಬನ್ನಿರೇ ಸಖಿ ಬನ್ನಿರೇ—ಸೋ
ಬಾನೆ ಎನ್ನಲು ಬನ್ನಿರೇ
ಬನ್ನಿ ಹೂಮಳೆಗರೆದು ಸುರಳುವ
ದಿವಕೆ ಸುದ್ದಿಯ ಸಾರುವ—ನ-
ಮ್ಮರಸರುಬ್ಬೆಗ ಕಳೆಯುವ.

(ಹೊರಡುವರು.)

ತೆರೆ

## ದೃಶ್ಯ ೪

(ಜೀರ್ಣಪರ್ಣಶಾಲೆಯ ಹೊರಗೆ ತಪಸ್ಸಿನಿಂದ ತೇಜಸ್ವಿನಿಯೂ ದಗ್ಧಕಾಮೆಂ
ಶುದ್ಧೆಯೂ ಆದ ಅಹಲ್ಯೆ ಹೊರಟುಬರುತ್ತಾಳೆ. ರಾಮನು ದೂರದಲ್ಲಿ ಬೆ
ಗೊಂಡವನಂತೆ ಸ್ತಬ್ಧನಾಗಿ ನಿಂತಿದ್ದಾನೆ.)

ಅಹಲ್ಯೆ

ಇದೆ ಕನಸೋ ಅದೆ ಕನಸೋ
ನಾನರಿಯೆ—ಅಚ್ಚರಿಯೋ ॥ ಪ ॥

ತನುವಿಡಿದಾ ಯಾಮಿನಿಯೊಳ್
ಬಾನಲೆವಾ ಗಾಳಿಯವೊಲ್
ನನ್ನುಳಿದಿನ್ನೊಂದಿರದ
ಬಾಳ್ಮಾಗಿಯಿತೆ ಗೋಳ್ತನದ ॥ ಇದೆ ಕನಸೋ . . .

ಬತ್ತಲ ಬಾನಿನ ಬಿಲವಂ
ತುಳುಕಿರುವೀ ಬೆಳಕಂತೆ
ಥಟ್ಟನೆ ಬಾಳುಕ್ಕಿ ಬರೆ
ಕನಸೆನ್ನದೆ ನಂಬುವರೆ ॥ ಇದೆ ಕನಸೋ . . .

ಇನಿದನಿಗಳ ಕಿವಿ ಕೊಂಡಿದೆ
ಬಾನ್‌ವರೆಗೂ ಕಣ್ ಹರಡಿದೆ
ಬನದೆಲರಿನ ನರುಗಂಪಂ
ನಾಸಿಕವರಿತಿದೆ ಸೊಂಪಂ ॥ ಇದೆ ಕನಸೋ . . .

ಕರ್ಣಿಕೆ ನಾ ಜಗವರಳು
ಅರಳಿದೆನೋ ಇಂತೆನಲು
ಹೊರವಾಯಿತು ನನ್ನಿರವು
ಕೊರಗಳಿಯಿತು ನನ್ನರಿವು ॥ ಇದೆ ಕನಸೋ . . .
ಅಹ ಅಚ್ಚರಿ ಪರಿತಾಪಂ
ಶಾಪದ ದಳ್ಳುರಿ ತಾಪಂ

ಜನ್ಮಾಂತರ ವಾರ್ತೆ ಇದು
ಎನಿಸುವ ನವಜನ್ಮವಿದು || ಇದೆ ಕನಸೋ . . .

ಮಾಂತ್ರಿಕನೊಂದಾಟದವೊಲ್
ಕ್ರಾಂತಿಯಾಯಿತೆನ್ನಿರವೊಳ್
ತಣಿದಿಂದ್ರಿಯ ತಣಿದೊಳಗು
ಬೆಳಬೆಳಕೇ ಒಳಹೊರಗು || ಇದೆ ಕನಸೋ . . .

(ರಾಮನನ್ನು ನೋಡಿ ಮುಂದುವರಿದು)

ನನ್ನಿದಿರೊಳು ನಿಂತಿಹ ಹೇ
ಮಂಗಳಸುಂದರ ರೂಹೇ
ನಿನ್ನದೆಯೇ ಈ ಮಾಟಂ
ಮರಳಿಯು ನಾನಿರುವಾಟಂ || ಇದೆ ಕನಸೋ . . .

ರಾಮ

ಈ ತಿರೆಯೇ ಗೋಳಿಡುವೊಲ್
ದನಿ ಮೊಳಗಿತು ಈ ಬನದೊಳ್
ನಾ ಬಂದೆಂ ಹದನರಿಯೆ
ಕಾಂಬೆನದೇನಚ್ಚರಿಯೇ || ಇದೆ ಕನಸೋ . . .

ಪಂಚಭೂತವೊಗ್ಗೂಡಿ
ಇದಿರೇ ಅಯ್ತೀ ನೋಡಿ
ಎನೆ ಬಯಲಿಂ ಮೂಡಿ ಬಹೆ
ಮನಕೆ ಬೆರಗ ತರುತಲಿಹೆ || ಇದೆ ಕನಸೋ . . .

ದೇವತೆಯೊಲು ಕಂಗೊಳುವೆ
ಮಾತೆಯವೊಲು ಬಗೆಗೊಳುವೆ
ಹೇ ಮಂಗಳೆ ಶರಣಾದೆಂ
ಹರಸವ್ವಾ ಮಗನಾದೆಂ || ಇದೆ ಕನಸೋ . . .

ಅಹಲ್ಯೆ

ಸುಂದರ ಶುಭಕರ ಮೃತಸಂಜೀವಕ
ಪತಿತೋದ್ಧಾರಕ ಚೇತನವೇ
ಏಳೇಳ್ಮೆ ಮಹಿಮಾನ್ವಿತ ಬಾಲಕ
ನಮೋ ನಮೋ ನಿನಗೋ ಶಿವವೇ!

ಇರುಳಿನ ಕುರುಡನು ಕಳೆವ ಸುಧಾಕರ–
ಸಮ ಮುಖಮಂಡಲ ಚೆನ್ನಿಗನೇ
ತಿರೆಮುಗುಳರಳಿಸಿ ಆಗಸದರಕೆಯ
ತುಂಬುವ ದಿನಕರದರ್ಶನನೇ,

ಕಾಮಹತಳು ನಾನಕಾಮೆಯಾದೆನು,
ಬಿದ್ದವಳೆದ್ದೆನು ಹಗುರಾಗಿ;
ಆಸೆಯ ಋಣ ತೀರಿತು ಹೊರೆ ಇಳಿಯಿತು,
ನಿನಗೊಪ್ಪಿಪೆನಿದ ತಲೆಬಾಗಿ.

(ರಾಮನಿಗೆ ನಮಿಸುವಾಗ ವಿಶ್ವಾಮಿತ್ರ ಲಕ್ಷ್ಮಣರು ಪ್ರವೇಶಿಸುವರು.)

ವಿಶ್ವಾಮಿತ್ರ

ಒಳ್ಳಿತು ವತ್ಸ—ಒಳ್ಳಿತಾಯಿತ್ತೈ,
ಒಳ್ಳಿತಾಯಿತೌ ಕಲ್ಯಾಣಿ.
ಎಲರನುಕೂಲಿಸೆ ಇಧ್ಮಗತಾಜ್ಯವು
ಜ್ವಲಿಸುವ ತೆರನಿರವಾಂತೆಯ ನೀ.
ದಗ್ಧಕಾಮೆ ಓ ದುಗ್ಧತಪಃಫಲೆ
ಶುದ್ಧೆ ನಿರ್ಮುಕ್ತೆ ಓ ತಾಯೆ
ತ್ರಿಜಗದ್ವಂದಿತೆ ನಾಮಪಾವನೆ
ಇಂದಹಲ್ಯೆ ಗೌತಮಜಾಯೆ.

(ಹೂಮಳೆಗರೆಯುವುದು. ಅಹಲ್ಯೆ ಹರಕೆಯನ್ನು ಸೂಡಿ ತನಗೆ
ಲಕ್ಷ್ಮಣನನ್ನು ಎತ್ತಿ ಸಂತೈಸಿ—)

ಅಹಲ್ಯೆ

ಧನ್ಯಳಾದೆನ್ನೆ ಮಹಾನಿವರೇಣ್ಯಾ
ಧನ್ಯಳಾದೆ ನಾ ಬಾಲಕರೆ!

(ತನಗೆ ತಾನು ಹೇಳಿಕೊಳ್ಳುವಂತೆ)

ದಿಟ ನಾ ಶುದ್ಧಳು;—ಆರೊಪ್ಪಿಗೆಯಿಂ?
ಅಳಿಸುವರಾರೀ ಬಾಳ ಕರೆ!

ತನುವೆನಗೊಪ್ಪಿಸಿ ಮನವೆನಗೊಪ್ಪಿಸಿ
ತಪವಂ ಗಳಿಸೆನ್ನೊಪ್ಪಿತಕೆ
ಒಲಿದ ಮಹಾತ್ಮನ ಸರ್ವಸ್ವವನೂ
ವಿಕ್ರಯಿಸಿದೆ ಹಾ ವಿಭ್ರಮಕೆ!

ಯಾಚಿಪೆ ಕ್ಷಮೆಯುಂ ಸರ್ವಭೂತಗಳೆ
ಓ ವನದೇವತೆ ಓ ಎಲರೇ
ತಿರೆಯಧಿದೇವತೆ ಜಲದಧಿದೇವತೆ
ಓ ಮಜ್ಜೀವನಕಾರಣರೇ!—

ಕರುಣೆಯು ಹೊನಲೇ ಒಯ್ಯಿಂದೆನ್ನಯ
ವೊರೆಯುನು ಸಕಲರ ಹೃದಯಕ್ಕೆ
ಮಜ್ಜೀವೇಶನ ನಿಗೂಢವಾಸಕೆ.
ಈ ಬಾಳೆನಗೂ ಲೇಸಕ್ಕೆ!

ಗೌತಮ

(ಪ್ರವೇಶಿಸಿ)

ಕ್ಷಮಿಸುವರಾರ್, ಆರ್ ಕ್ಷಮೆಗೆ?—
ದುಗುಡವ ಬಿಡು ಕಾಂತೆ.
ಭವಿತವ್ಯತೆಗೇಕೀ ವ್ಯಥೆ
ಓ ಪರಿತಾಪಶ್ರಾಂತೆ!

ತನ್ನರಿವನು ತಾ ಪಡೆಯುವ
ಚೇತನಕೀ ಕ್ರಾಂತಿ
ಸಾಜವೆ ಸರಿ, ತತ್ಫಲವೀ
ವಿಪಾಕ ವಿಶ್ರಾಂತಿ.

ಭವಶುಕ್ತಿಯ ಮುಕ್ತಾಫಲ-
ವೆನೆ ನಲ್ಕಳಿಗೊಂಡು
ಹೊರಬರೆ ನೀ ಕೊಳೆಯಳಿಯುತ
ಮುದವಾಂತೆನು ಕಂಡು.

ಇನ್ನಾಯಿತು ನಮಗೀ ಜಗ
ತಾವರೆಯೆಲೆಯಂತೆ
ಋತವರಿಯುತ ನಿಸ್ಪೃಹತೆಯೊ-
ಳಿರಬಲ್ಲೆವು ಕಾಂತೆ.

ವಿಶ್ವಾಮಿತ್ರ

ಅಹಹ—ಗೌತಮನೇ ಬಂದನಿಗೋ
ಮಂಗಳಪೂರ್ಣತೆಗೆ
ನಲ್ವಾತಿನ ಸೊದೆಗರೆಯುತ
ನಮ್ಮೆಲ್ಲರ ಕಿವಿಗೆ !

(ವಿಶ್ವಾಮಿತ್ರ ಗೌತಮರು ಆಲಿಂಗಿಸುವರು. ರಾಮಲಕ್ಷ್ಮಣರು ಮಣಿವರು.)

ಅಹಲ್ಯೆ

(ಪತಿಯ ಆಗಮನದಿಂದ ಬೆರಗುಗೊಂಡು, ತನಗೆ ತಾನೆ)

ಇದೆ ಕನಸೋ ಅದೆ ಕನಸೋ
ನಾನರಿಯೆ—ಅಚ್ಚರಿಯೇ !
ರುದ್ರನ ಕಂಡಾ ಅಳಿವು !
ಭದ್ರನ ಕಾಂಬೀ ಉಳಿವು !

ಅಂದು ಬಯಕೆ ಸಂದಾ ತೆರ !
ಇಂದು ಬಯಕೆ ಸಲುವೀ ತೆರ !

ಅಂದಿನ ಅಳಲೇ ದಿಟವೋ !
ಇಂದಿನ ನಲವೇ ದಿಟವೋ !

(ಹತ್ತಿರ ಬಂದ ಗೌತಮನ ಪದತಲಕ್ಕೆ ಕುಸಿಯುತ್ತಾ)

ಕುಸಿಯಿತಂದು ಪೊಲ್ಲಮೆ ಹೊರೆ
ಕುಸಿವುದಿಂದು ನಲ್ಮೆಯ ಹೊರೆ.

ಗೌತಮ

(ಆಕೆಯನ್ನು ಸಂತೈಸಿ)

ಏಳೌ ಸಖಿ—ದುಸ್ಸ್ವಪ್ನಕೆ
ಬೆಚ್ಚುತಲೆಚ್ಚತ್ತಂತೆ
ನಾವೆದ್ದೆವು ನಲ್ತಿಳಿವಿಗೆ.
ಏಳೌ, ಬಾ, ಬಿಡು ಚಿಂತೆ.

ನಮ್ಮಾಶ್ರಮವೈದಿರುವೀ
ಮಹಿಮರ ನಾವಾದರಿಸೆ
ಅರ್ಘ್ಯಾದಿಗಳನಣಿಗೈಯಲು
ಸಹಚರಿ ಸಮಯವಿದ್ದೈಸೆ.

ಅಹಲ್ಯೆ

(ಮೆಲ್ದನಿಯಲ್ಲಿ)

ಬಯಸುವೆನಾ ಗಂಗೆಯ ತೆರ
ಪದದಿ ಕರಗಿ ಹರಿಯೆ,
ಇಲ್ಲದಿರಲು ಹಗುರವಾಗಿ
ಕಂಪಿನಂತೆ ಸರಿಯೆ.

ಮೈಯೆ ಭಾರ ಮನವೆ ಭಾರ
ಬದುಕೆ ಭಾರವೆಂಬ
ಆಸರೆಯೇ ಬೇಡದಂಥ
ನಲವೆ ನನ್ನ ತುಂಬ.

ಗೌತಮ

ಧರ್ಮರತಿಗು ಕರ್ಮಗತಿಗು
ಮಿಕ್ಕು ಸ್ವಚ್ಛಂದ
ಇನ್ನು ಮುನ್ನು ನನ್ನ ನಿನ್ನ
ಆತ್ಮದಾನಂದ!

ವಿಶ್ವಾಮಿತ್ರ

ಸತಿಯು ಪೂರ್ಣ ಪತಿಯು ಪೂರ್ಣ
ಜೋಡಿಯೊಂದಿ ಪೂರ್ಣ;
ಆತ್ಮರತಿಗೆ ಆತ್ಮವಾಯ್ತು
ಕಾಮವಾಯ್ತು ತೀರ್ಣ.

ಇದೆ ಮಂಗಳ ಇದೆ ಮಧುರ
ಈ ವಿಪಾಕ ಸುಂದರ;
ಅರಿವು ಇರವು ಸ್ವಸ್ಥವಿರುವ
ಆನಂದ ಮಂದಿರ!

ಅಹಲ್ಯೆ

ಇರುಳದೆತ್ತ ಬೆಳಕಿದೆತ್ತ
ಸಾವುಜೀವವೆತ್ತ!
ಒಂದೆ ಬಾಳಿನಲ್ಲಿ ಇವನು
ಕೋದ ಮರ್ಮವೆತ್ತ!

ಗೌತಮ

ಹಣ್ಣೊಳು ಸಿಹಿ ಕಾಯೊಳು ಕಹಿ
ಮರದ ರಸವದೆಂತು
ಆರೆಬಳವಿಯೊಳಾನಂದವೆ
ನೋವೆನಿಸುವುದಿಂತು!

ಅಹಲ್ಯೆ

ಅಂತೊ ಎಂತೊ!—ಅಂತು ಕಂಡೆ
ಭವಸಾಗರ ಪಾರವಂ;

(ಪತಿಯನ್ನು ನೋಡಿ ಮುಗುಳ್ನಗೆಗೂಡಿ)

ನಮ್ಮ ನಮ್ಮ ಮಾತಿನಲ್ಲಿ
ಮರೆತೆವತಿಥಿಕಾರ್ಯವಂ!

(ಎಂದು ತೆರೆಯ ಮರೆಗೆ ಹೋಗುವಳು.)

(ದೂರದಲ್ಲಿ ಆಶ್ರಮವಾಸಿಗಳು ಸ್ವಾಗತ ಗೀತವನ್ನು ಹಾಡಿಕೊಂಡು ಬರುತ್ತಿರುವ ಗೀತದ ಪಲ್ಲವಿಯಾದ "ಸ್ವಾಗತ ಸ್ವಾಗತ ಮುನಿಗೆ—ವರವಿಶ್ವಾಮಿತ್ರನಿಗೆ" ಎಂಬ ಚರಣವು ಸ್ಫುಟವಾಗಿ ಕೇಳಿಬರುತ್ತದೆ. ಮಿಕ್ಕವು ಮಂಕಾಗಿ ಕೇಳಿಬರುತ್ತವೆ.)

ಗೌತಮ

ಮರೆತ ಕಾರ್ಯವೆಚ್ಚರಿಸುತ
ಸ್ವಾಗತವನು ಮಾಡುತ
ನಮ್ಮ ಮುಂದಿಯ್ಯೆತಂದರು
ಮುನಿಸುತಿಯನೆ ಹಾಡುತ!

(ಒಂದು ಕಡೆಯಿಂದ ಕೌಶಿಕಮೈತ್ರೇಯರೊಡಗೂಡಿ ಆಶ್ರಮವಾಸಿಗಳು ಪ್ರವೇಶಿಸುವರು.)

ಸ್ವಾಗತ ಸ್ವಾಗತ ಮುನಿಗೆ
ವರ ವಿಶ್ವಾಮಿತ್ರನಿಗೆ ॥ ಪ॥

ಮೈತ್ರೇಯ

ಶಾಂತ ಸುಗುಣ ಗಂಭೀರಗೆ
ಭವದ ಪಾರ ಕಂಡವನಿಗೆ
ಬಾಳ ಕಡಲ ಕಡೆದು ದಿವ್ಯ
ಮೋದಾಮೃತವುಂಡವನಿಗೆ
ಸ್ವಾಗತ....

ಕೌಶಿಕ

ಧರ್ಮದ ಗತಿ ಗಹನವೆಂದು
ಒಂದೇ ಹಾದಿಯೊಲ್ಲದವಗೆ
ಹಲವು ತೆರದಿ ಬಾಳ ತುಳಿದು
ಚಿತ್ರಚರಿತನಾದ ಋಷಿಗೆ
ಸ್ವಾಗತ....

(ವಿಶ್ವಾಮಿತ್ರನು ರಾಮಲಕ್ಷ್ಮಣರೊಡನೆ ಮುಂದೆ ಬಂದು ಆಶ್ರಮವಾಸಿಗಳ ಪ್ರಣಾಮಗಳನ್ನು ಸ್ವೀಕರಿಸುವಾಗ, ಹಿಂದಿನಿಂದ)

ಗೌತಮ

ಬ್ರಹ್ಮತೇಜೋಬಲದ ಮುಂದು
ಧಿಕ್ ಕ್ಷತ್ರಿಯಬಲವೆಂದಗೆ
ಹತಕಾಮಗೆ ಜಿತಮನ್ಯುಗೆ
ಚಿರಬ್ರಹ್ಮವಿಹಾರಿಗೆ
ಸ್ವಾಗತ....

(ಮೈತ್ರೇಯ ಕೌಶಿಕರೂ ಆಶ್ರಮವಾಸಿಗಳೂ ಕೇಳಿ ಕಂಡು ಸಂಭ್ರಾಂತರಾಗುವರು.)

ಅಹಲ್ಯೆ

(ಅಷ್ಟುಹೊತ್ತಿಗೆ ಪಾದ್ಯವನ್ನು ತಂದು)

ಕ್ಷಮಾ ದಯಾ ಬಾಹಿರಮಾ-
ದೊಂದುಮಿರದು ಹಿರಿಯ ಮತಿಗೆ

ಕೃತಸಂಕಲ್ಪಗೆ ಯತಿಗೆ
ಸುಸ್ವಾಗತ ಓವಸ್ವಿಗೆ
ಸ್ವಾಗತ....

(ಆಶ್ರಮವಾಸಿಗಳು ಆಶ್ಚರ್ಯದಿಂದ ತುಸಕಾಲ ಸ್ತಬ್ಧರಾಗುವರು. ಒಬ್ಬ ಹಿರಿಯ ವಟುವು ಮೆಲ್ಲನೆ ನುಸುಳಿ ಮರೆಯಾಗುವನು, ಮಾಧವಿಗೆ ತಿಳಿಸಲೆಂದು. ಮೈತ್ರೇಯ ಕೌಶಿಕರು ತಮ್ಮ ಸಂದೇಹಾಶ್ಚರ್ಯಗಳು ತಿಳಿದು ಎಚ್ಚತ್ತ ಮೇಲೆ ಇಬ್ಬರೂ ಮುಂದೆ ಓಡಿಬಂದು ಗೌತಮ ಅಹಲ್ಯೆಯರ ಸನಿಯದಲ್ಲಿ, ಮೈತ್ರೇಯನು ಗೌತಮನ ಹತ್ತಿರ ಕೌಶಿಕನು ಅಹಲ್ಯೆಯ ಹತ್ತಿರ ಅನಿವಾರ್ಯವಾಗಿ ಮಣಿಯುವರು.)

| ಗೌತಮ | ಅಹಲ್ಯೆ |
|---|---|
| ಬಾರ ತಮ್ಮ ಬಾರ | ಬಾರ ವತ್ಸ ಬಾರ |
| ಮೈತ್ರೇಯ | ಕೌಶಿಕ |
| ಇಂದು ನಲವಪಾರ ! | ಈ ಪುಣ್ಯವಪಾರ ! |

(ಹೀಗೆ ಒಬ್ಬರನೊಬ್ಬರು ಯಥೋಚಿತವಾಗಿ ಮನ್ನಿಸುತ್ತಿರುವಲ್ಲಿ ಆಶ್ರಮವಾಸಿಗಳೆಲ್ಲರೂ ಕುಶಲವನ್ನು ಕೇಳುತ್ತಿರುವಾಗ ಸಂತೋಷವು ಹೊಮ್ಮಲು, ಇತ್ತ ವಿಶ್ವಾಮಿತ್ರನು ಈ ಸಂತೋಷದ ಸೆಳವಿಗೆ ಸಿಕ್ಕಿ ಇವಕ್ಕೆ ಕಾರಣನಾದ ರಾಮನನ್ನು ಕುರಿತು)

ವಿಶ್ವಾಮಿತ್ರ

ನಲವಿನ ಕಡಲಿದು ಉಕ್ಕುತಿದೆ—ಅಹ
ಆವ ಹಿಡಿತಕೂ ದಕ್ಕದಿದೆ !

(ಇದು ಮೇಳ ಸಂಗೀತವಾಗುತ್ತದೆ.)

ಈ ಕಡಲುಕ್ಕಿಗೆ ರಾಮನೆ ಚಂದ್ರ.
ಜಯ ದಾಶರಥೇ ಜಯ ರಾಮ !

(ರಾಮನೀಗ ಎಲ್ಲರ ಗಮನವನ್ನೂ ಸೆಳೆದು ಮಧ್ಯಗತನಾಗುತ್ತಾನೆ.)

ಗೌತಮ

ಒಮ್ಮನರೊಕ್ಕೂಟದ ಆನಂದ
ಪ್ರೇಮಯೋಗದ ಸ್ವತಂತ್ರಬಂಧ ;

ಈ ನಲ್ಮೆಗಾದ ದಶರಥಕಂದ
ಜಯ ದಾಶರಥೇ ಜಯ ರಾಮ!

ಮೈತ್ರೇಯ

ಇಂದೆಮ್ಮಣಿಕೆಯೆ ದೇವರ ಎಣಿಕೆ;
ಕೂಡಿತು ಪುಣ್ಯ, ಸಂದಿತು ಸಲಿಕೆ
ಕೌಸಲ್ಯಾಸುತ ಬರಲೀ ಬನಕೆ.
ಜಯ ದಾಶರಥೇ ಜಯ ರಾಮ!

ಅಹಲ್ಯೆ

ಹಾಲ್ಗಡಲೊಳು ಸೊದೆಯೊಗೆದಾ ರೀತಿ
ಭವ ಕೊಟ್ಟಿತು ಕೊನೆಗಿಂತೀ ಪ್ರೀತಿ;
ಧನ್ವಂತರಿ ನವಿಮ್ಮ ದಾಶರಥಿ.
ಜಯ ದಾಶರಥೇ ಜಯ ರಾಮ!

ರಾಮ

ಏಗೈದೆನು ನಾನೇಗೈದುದಕೆ?
ಹುಲುನರರಪ್ಪರೆ ಕತವಿಾ ಶಿವಕೆ!
ಫಲಿಸಿತಿಂತಿಂದು ಹಿರಿಬಾಳೆರಕೆ
ಜಯ ಗುರುದೇವ ಜಯ ಗುರುವೆ!

ಲಕ್ಷ್ಮಣ

ಜಯಜಯ ಗುರುವೆ ಜಯ ಗುರುದೇವ
ಜಯ ದಾಶರಥೇ ಜಯ ರಾಮ!

ವಿಶ್ವಾಮಿತ್ರ

ಸಕಲಾರ್ತಿಶಮನ ದುರಿತೌಘದಮನ
ಜಯಮಂಗಳ ಶುಭ ಜಯ ರಾಮಾ!

ಎಲ್ಲರೂ

ಜಯಮಂಗಳ ಶುಭ ಜಯ ರಾಮಾ!

(ದೇವತೆಗಳು ಮೇಲಿಂದ ಪುಷ್ಪವನ್ನು ವರ್ಷಿಸುವರು.)

(ಈ ಮಧ್ಯದಲ್ಲಿ ಮಾಧವಿ ಗುಂಪಿನಲ್ಲಿ ನುಸುಳಿ ಬಂದು ಅಹಲ್ಯೆಯನ್ನು ಆಲಿಂಗಿಸುವಳು.)

ಎಲ್ಲರೂ

ಜಯ ರಘುನಂದನ ನರಕುಲಮಂಡನ
ಜಯಜಯ ರಾಮಾ ದಾಶರಥೇ
ಜಯ ವನಿತಾವನ ಜಯಜಯ ಪಾವನ
ಜಯ ರಘುರಾಮಾ ದಾಶರಥೇ!

ತೆರೆ

## ದೃಶ್ಯ ೫

(ನಂದನವನ—ಮನ್ಮಥನೊಡಗೂಡಿದ ಸುರರೂ ಸುರಸುಂದರಿಯರೂ ನೃತ್ತಗೀತದಲ್ಲಿ ತೊಡಗಿದ್ದಾರೆ.)

ವಾದ್ಯಮೇಳ

ತಿರೆಯತ್ತಣಿಂ ಚಿಮ್ಮಿದ
ಸೊದೆಯ ಮಿಾರಿತೀ ಮುದ!

ಒಬ್ಬಳು

ಸ್ವರ್ಗಕಾಯ್ತು ನವಸುಷಮ

ಒಬ್ಬ

ಅರಳಿತು ಮಂದಾರಸುಮ

ಮತ್ತಿಬ್ಬರು

ಇಂದೆಣೆಯಾರೆಮಗಮಮ
ಬಾಳಿಗೇರಲೀ ಮುದ

ಮೇಳ

ತಿರೆಯತ್ತಣಿಂ ಚಿಮ್ಮಿದ
ಸೊದೆಯ ಮಿಾರಿತೀ ಮುದ!

ಒಬ್ಬಳು

ಮಾಗಿ ಮುಗಿಯೆ ಮೊದಲ ಮಳೆಗೆ
ಸೂಸಿ ಬರುವ ಸೊಸಲಿನೊಲು

ಮತ್ತೊಬ್ಬ

ಜೇಸಗೆಯೊಳು ಬೀಸಿ ಬರುವ
ತೆಂಗಾಳಿಯ ತೆಳು ಸುಳಿಯೊಲು

ಮೇಳ

ತಿರೆಯತ್ತಣಿಂ ಚಿಮ್ಮಿದ
ಸೊದೆಯ ಮಿಾರಿತೀ ಮುದ !

ಒಬ್ಬಳು

ದಿವದ ಬಡವೆ ತಿರೆಯೊಳೆನೆ

ಮತ್ತೊಬ್ಬಳು

ಅವಳ ಬದುಕೆ ನಮ್ಮದೆನೆ

ಒಬ್ಬ

ಅವಳು ಬೀಳೆ ಬಿದ್ದೆವೆನೆ

ಮತ್ತೊಬ್ಬ

ಅವಳೇಳ್ಗೆಯೊಳೆದ್ದೆವೆನೆ

ಮೇಳ

ತಿರೆಯತ್ತಣಿಂ ಚಿಮ್ಮಿದ
ಸೊದೆಯು ಮಿಾರಿತೀ ಮುದ!

ಒಬ್ಬ

ಮನಮನ ವಿರಸದಿ ಮುಗಿಯೆ

ಮತ್ತೊಬ್ಬ

ಕಾಮವೆ ಎದೆ ಎದೆ ಸುಗಿಯೆ

ಮತ್ತಿಬ್ಬರು

ಮರತುಹೋದ ಮರದಂತೆ
ಹೊಮ್ಮಳಿಯಿತು ಬಾಳಂತೆ.

ಮೇಳ

ತಿರೆಯತ್ತಣಿಂ ಚಿಮ್ಮಿದ
ಸೊದೆಗು ಮಿಕ್ಕಿತೀ ಮುದ !

ಒಬ್ಬ

ಮನಮನ ಪ್ರೇಮಕೆ ತೆರೆಯೆ

ಒಬ್ಬಳು

ಇರವೊಳು ನಲ್ಮೆಯೆ ನೆರೆಯೆ

ಮತ್ತಿಬ್ಬರು

ಬಂದ ಬನದಿ ಬಂಡುಣಿಯೊಲು
ನಲಿವೆವಲಾ ನಂದನದೊಳು.

ಮೇಳ

ತಿರೆಯತ್ತಣಿಂ ಚಿಮ್ಮಿದ
ಸೊದೆಗು ಮಿಕ್ಕಿತೀ ಮುದ !

ಒಂದು ತಂಡ

ಓ ನಂದನವನವಾಸೀ !

ಮತ್ತೊಂದು ತಂಡ

ಓವೋ ಹೃದಯವಿಕಾಸೀ !

ಒಂದು ತಂಡ

ಒಲವರಸೇ !

ಮತ್ತೊಂದು ತಂಡ

ಚೆಲುವರಸೇ !

ಎಲ್ಲರೂ

ಜಯ ಜಯ ಓ ಮುದದರಸೇ!

ಮೇಳ

ತಿರೆಯತ್ತಣಿಂ ಚಿಮ್ಮಿದ
ಸೊದೆಗು ಮಿಕ್ಕಿತೀ ಮುದ!

ತೆರೆ

ಕವಿಯ ಹರಕೆ

ನನ್ನಿಗಾಗಲಿ ಸಕಲಜೀವರ ಚಿತ್ತವುನ್ನತಿಗಾಗಲಿ,
ತಾಳ್ಮೆಗಾಗಲಿ ಬಾಳ್ವೆ, ಅಂತೆಯೆ ಶಿವಕೆ ಸನ್ಮುಖವಾಗಲಿ.
ಮೋದಸುರಭಿಯ ನಿರುತ ಬೀರುತ ಸುಹೃನ್ಮಾನಸ ಸರದಲಿ
ಕವಿ ಪುರೋಹಿತನೀತಮಾದೀ ಗೀತರೂಪಕವರಳಲಿ!

---

# ಶಬ್ದಾರ್ಥಕೋಶ ಮತ್ತು ಲಘು ಟಿಪ್ಪಣಿ

(ಅಂಕಿಗಳು ಪುಟಗಳನ್ನು ಸೂಚಿಸುತ್ತವೆ)

೧. ವಾತಾಪಿಯುಂಡದೊಳು—ವಾತಾಪಿ ಒಬ್ಬ ರಾಕ್ಷಸ; ಆತನ ಅಣ್ಣ ಇಲ್ವಲ. ಇವರು ಋಷಿಗಳನ್ನು ಪೀಡಿಸುತ್ತಿದ್ದ ಬಗೆ ವಿಚಿತ್ರವಾಗಿತ್ತು. ಇಲ್ವಲ ಋಷಿಗಳನ್ನು ಔತಣಕ್ಕೆ ಕರೆದು, ತಮ್ಮ ವಾತಾಪಿಯನ್ನು ಮೇಕೆಯನ್ನಾಗಿ ಮಾಡಿಕೊಂಡು ಅಡಿಗೆ ಮಾಡಿ ಬಡಿಸಿ, ಅವರು ಅದನ್ನು ತಿಂದ ಬಳಿಕ "ವಾತಾಪೀ ಹೊರಕ್ಕೆ ಬಾ" ಎಂದು ಮಂತ್ರವತ್ತಾಗಿ ಕೂಗಿದಾಗ ಆತ ಅವರ ಹೊಟ್ಟೆಯನ್ನು ಸೀಳಿ ಹೊರಕ್ಕೆ ಬರುತ್ತಿದ್ದನು. ಅಗಸ್ತ್ಯ ಮಾತ್ರ ಆ ವಾತಾಪಿಯನ್ನು ತಿಂದು ಜೀರ್ಣಿಸಿಕೊಂಡನು. ಇದು ಕತೆ.

ಆಮೋದ—ಸುವಾಸನೆ ಮತ್ತು ಆನಂದ.

ನಿರ್ಜರರು—ಮುಪ್ಪಿಲ್ಲದವರು; ಅರೆ ಬೆಂದವರು ಎಂದೂ ಅರ್ಥ ಮಾಡಬಹುದಲ್ಲವೆ?

ಸುಮನಸರು—ದೇವತೆಗಳು; ಒಳ್ಳೆ ಮನಸ್ಸುಳ್ಳವರು.

೨. ಬವಣಿಕೆಯೇ ಹಂಬಲಿಕೆ—ಶ್ರಮವೇ ನಮ್ಮಾಸೆ; ಬಿಡುವಲ್ಲ.

ನಡಗೆಟ್ಟಿಹುದೋ ನಿಲ್ಲದ ಚಂದ—ಒಂದೆಡೆ ಸ್ಥಿರವಾಗಿ ನಿಲ್ಲದ ಚೆಲುವನ್ನು ನಂದನದ ಹೂಗಳು ಸೆರೆಹಿಡಿದು ನಿಲ್ಲಿಸಿವೆ.

ಆಡುಂಬೊಲ—ಆಟದ ಮೈದಾನ.

ಬಚ್ಚಿಡುವುಡುಗಳ—ಬಚ್ಚಿಡುವ+ಉಡುಗಳ, ಎಂದರೆ ನಕ್ಷತ್ರಗಳ

ಬೆಳ್ಳಿ—ಶುಕ್ರ, ಇದು ಮಾತ್ರ ಮುಂಜಾನೆಯಲ್ಲಿ ಸ್ವಲ್ಪ ಹೊತ್ತಿನವರೆಗೆ ಹೊಳೆಯುತ್ತಿರುತ್ತದೆ.

ಮುಗಿಲ ಬೆನ್ನೇರಿ—ಬಿಳಿ ಮೋಡದ ಬೆನ್ನಿಗೆ ಚಿಗಿದು ಕುಳಿತು.

೩. ಹೆರರಿಗರಿದೆನಿಪ—ಹೆರರಿಗೆ+ಅರಿದು+ಎನಿಪ; ಮಿಕ್ಕವರಿಗೆ ಅಸಾಧ್ಯವೆನಿಸುವ.

೪. ರಮ್ಯವನೋತ್ಸಂಗಿ—ಅಂದವಾದ ತೋಪನ್ನು ತನ್ನ ತೊಡೆಯಮೇಲಿರಿಸಿಕೊಂಡಿರುವ ಈ ಸ್ಥಳ.

೮. ಆತನಳವ ಕಾಣೆ—ಆತನ+ಅಳವ+ಕಾಣೆ; ಆತನ ಸಾಮರ್ಥ್ಯವನ್ನು ತಿಳಿದುಕೊಳ್ಳುವುದಕ್ಕಾಗಿ.

೧೦. ಬಿಡುಗಣ್ಣರು—ರೆಪ್ಪೆಯಿಕ್ಕದೆ ನೋಡುವವರು ದೇವತೆಗಳಿಗೆ ರೆಪ್ಪೆಗಳೇ ಇಲ್ಲ. (ಇಂಥವರ ಕಣ್ಣಿಂದ ಮರೆಯಾಗಿರುವುದೇ ಲೇಸಲ್ಲವೇ ?)

೧೨. ತಪೋಭಿರಕ್ಷಿತ ಗೌತಮನೊಳಗ—ತಪಸ್ಸೆಂಬ ಅಗ್ನಿ ಈತನ ಅಂತಃಕರಣದ ಸುತ್ತಲೂ ಗಸ್ತು ತಿರುಗುತ್ತಿದೆ; ದುರ್ವ್ಯಸನಗಳಿಗೆ ಪ್ರವೇಶ ದುರ್ಲಭ.

ತಿರೆ ಸೋಕಿದ ಕತಕೆ—ರಾಗಕ್ಕೆಲ್ಲ ಭೂಮಿಯೇ ನಿಧಿಸ್ಥಾನ. ಸ್ವರ್ಗದಲ್ಲಿ ಎಲ್ಲ ಹಗುರ, ಪೇಲವ.

೧೩. ಕಣ್ಣ ಮೋಡಿ—ಕಣ್ಣುಗಳ ಬೆರಗು.

೧೮. ಏಕೀ ಹಲ್ಲಣ—ನಿಂತೆಡೆ ನಿಲ್ಲದೆ ಸುಮ್ಮನೆ ತಿರಿದಾಡುತ್ತಿರುವ ಮನಸ್ಸಿನ ಸ್ಥಿತಿ.
ಏಕೀ ತಲ್ಲಣ—ಮನಸ್ಸಿನ ಆತಂಕ.

೧೯. ಹುಸಿ ನಿನ್ನಾಸರು—ಹುಸಿ+ನಿನ್ನ+ಆಸರು ; ನಿನ್ನ ತಳಮಳಕ್ಕೆ ಸರಿಯಾದ ಕಾರಣವಿಲ್ಲ.

೨೦. ಆತನ ಹಸಾದವೆರೆಯುವ—ಆತನ+ಹಸಾದವ+ಎರೆಯುವ ; ಆತನ ನಲ್ ಬಗೆಯನ್ನು ಕೋರುವ.

೨೧. ಜಗವಾತುರಗೊಳ್ಳುವ ತೆರ—ಮುಂದೇನಾಗುವುದೋ ಏನು ಮಾಡುತ್ತಾನೋ ಎಂದು ಲೋಕ ಭಯಭ್ರಾಂತವಾಗುವ ಹಾಗೆ.

೨೨. ಅಮರ ಯೌವತವನ್ನೆ—ಅಮರ ಯುವತೀ ಸಮೂಹವನ್ನೇ.
ಭಾವ—ಅನುರಾಗ.

೨೩. "ನನ್ನಿ, ನನಗೆಣೆ ಯಾರು ಲೋಕದಿ"—"ನಿಜ, ನನಗೆ ಈ ಲೋಕದಲ್ಲಿ ಸಮಾನರಾರು?" ನಾವು ಯಾರನ್ನು ಮೆಚ್ಚುವೆವೋ ಅವರ ಮೆಚ್ಚುಗೆಯಿಂದ ನಮ್ಮ ಹಮ್ಮೇರುತ್ತದೆ.

೨೪. ಕೊರಂಬಿಟ್ಟನು ಕೇಕರದೊಳಗೆ—ಕಡಗಣ್ಣಿನ ನೋಟದಲ್ಲಿ ಮೊನಚಾದ ಅಂಬನ್ನಿಟ್ಟನು.

೨೫. ಬುವಿಬಾನಳೆದುರವಣಿಸಿದ....ಬಲಿ ದೊರೆಯುಂದದೊಳು—ಬಲಿಯೆಂಬ ದಾನವ ದೇವೇಂದ್ರನ ಸ್ಥಾನವನ್ನು ಆಕ್ರಮಿಸಿಕೊಂಡು ಮೂರು ಲೋಕಗಳನ್ನೂ ಆಳುತ್ತಿದ್ದಾಗ ವಿಷ್ಣು ವಾಮನ ವಟುವಾಗಿ ಬಂದು ಮೂರು ಹೆಜ್ಜೆಗಳಷ್ಟು ನೆಲವನ್ನು ಬೇಡಿ ಪಡೆದು, ಬೆಳೆಬೆಳೆದು ಒಂದು ಹೆಜ್ಜೆಯಿಂದ ಭೂಮಿಯನ್ನೂ ಮತ್ತೊಂದು ಹೆಜ್ಜೆಯಿಂದ ಆಕಾಶವನ್ನೂ ಅಳೆದುಕೊಂಡು ಮೂರನೆಯ ಹೆಜ್ಜೆಯನ್ನು ಬಲಿಯ ತಲೆಯ ಮೇಲೆಯೇ ಇಟ್ಟು ಆತನನ್ನು ಪಾತಾಳಕ್ಕೆ ಒತ್ತುತ್ತಾನೆ. ಇಲ್ಲಿ ಸೂರ್ಯನೇ ಬಲಿ. ಬೆಳೆಯುತ್ತಿರುವ ಇರುಳೇ ಶ್ಯಾಮತನು ವಿಷ್ಣು, ಆತನ ನೀಳ್ದ ಕಾಲೇ ಕರಿಮುಗಿಲಿನ ಸೀಳೊಂದು. ಅದು ಮುಳುಗುತ್ತಿರುವ ಸೂರ್ಯನ ತಲೆಯನ್ನು ಮೆಟ್ಟಿ ಆತನನ್ನು ಪಾತಾಳಕ್ಕೆ ಅದುಮುತ್ತಿದೆ. ಹಗಲಿನ ರಂಗಿನ ಸಿರಿಯೆಲ್ಲ ಪಡುವಣ ಕಮರಿಯಲ್ಲಿ ಬಿದ್ದುಹೋಗುತ್ತಿದೆ.

ವಿ ಮರುಂಥಿತ ನೀಲಾಂಬುಧಿ—ಸೂರ್ಯನನ್ನು ಇಲ್ಲಿ ಕಡೆಗೋಲಿನ ಮಂತಿನ ದಿಂಡಿಗೆ ಹೋಲಿಸಿದೆ. ಆತನ ಪೂರ್ವ ಪಶ್ಚಿಮ ಭ್ರಮಣವೇ ಕಡೆಹ. ಅದರಿಂದ ಕರಿ ಮುಗಿಲೆಂಬ ಕರಿಬೆಣ್ಣೆ ಈ ನೀಲವಾದ ಆಕಾಶದ ಕಡಲಲ್ಲಿ ಹುಟ್ಟಿಕೊಂಡಂತಿದೆ. ಆಕಾಶದ ನೀಲವೇ ಹೆಪ್ಪುಗೊಂಡು ಈ ಕರಿಮುಗಿಲಾಗಿದೆ.

ತಾಮಸಿಯಾತ್ಮ—ಹಿಂದುಮುಂದಿನ ತಿಳಿವಳಿಕೆಯಿಲ್ಲದಿರುವುದು, ನಿದ್ರಾಸಕ್ತವಾಗಿರುವುದು, ಮತ್ತು ಸೋಂಬೇರಿಯಾಗಿರುವುದು ಇವು ಮೂರೂ ತಮೋಗುಣ ಹೆಚ್ಚಾಗಿರುವವನ ಸ್ವಭಾವ.

ಚೆಂಬೆಳಗು—ಕೆಂಪು ಬೆಳಕು.

ತಾಮಸಿ—ಕತ್ತಲೆ ಯಾರ ಒಡತಿಯೋ ಅವಳು; ಇರುಳು.

ಕೂರ್ಮನ ಬೆನ್ನಿಂದೇಳುವ ಮಂದರ ಪರ್ವತದಂದದಿ. ರೋದೋಂತದ ಮುಗಿಲು: ದೇವಾಸುರರು ಹಾಲ್ಗಡಲನ್ನು ಕಡೆಯಲು ಮಂದರ ಪರ್ವತವನ್ನು ತಂದಾಗ ಅದು ಕಡಲಲ್ಲಿ ಮುಳುಗಿ ಹೋಯಿತು. ವಿಷ್ಣು ಆಮೆಯಾಕಾರವನ್ನು ತಾಳಿ ಅದನ್ನು ಬೆನ್ನಿನ ಮೇಲೆ ಹೊತ್ತು ಮೇಲಕ್ಕೆ ತಂದನು. ಅದರ ಹಾಗೆ ಭೂಮಿಯೂ ಬಾನೂ ಕೂಡುವೆಡೆಯಲ್ಲಿ ಕರಿ ಮುಗಿಲಿನ ಒಡ್ಡೊಂದು ಬೆಟ್ಟದಂತೆ ಮೇಲಕ್ಕೆದ್ದಿತು.

ರೋದೋಂತ—ಬುವಿಯೂ ಬಾನೂ ಕೂಡುವೆಡೆ.

ಫಳ್ಳನೆ ನೀಳ್ಮಿಂಚಿದಿಗೋ...ವಾಸುಕಿ ತನುವೆನಲು—ಹಾವಿನ ಒಳ ಮೈ ಬೆಳ್ಳಗಿದೆ. ಹೊರ ಮೈ ಸುಮಾರು ಕಪ್ಪಾಗಿದೆ. ಮಿಂಚು ಹೊಳೆದು ಅಳಿವಾಗ ಈ ಮೇಲು ಮೈ ಕೆಳಮೈಗಳ ಹೊರಳಾಟವೋ ಎನಿಸುತ್ತದೆ.

೨೬. ತಪಭಂಗ—ತಪದ ಭಂಗ. ಸಂಸ್ಕೃತದಲ್ಲಿ ಇದರ ರೂಪ ತಪೋಭಂಗವಾಗುತ್ತದೆ.

೨೭. ಮೌನದೊಳದ್ದಿದೆ—ಮೌನದಲ್ಲಿ ಮುಳುಗಿದೆ.

೨೮. ಬಳಕೆಯ ನೆಲವಿದು....ತರುಗಿಡವೆಲ್ಲ—ಸರ್ಕಸ್ಸಿನ ಆಟಗಾರನು ಅನೇಕ ಮೃಗ ಸ್ವಭಾವಗಳನ್ನು ತನ್ನ ಹಿಡಿತದಲ್ಲಿಟ್ಟುಕೊಂಡು ಪ್ರದರ್ಶಿಸುವಂತೆ ಸೂರ್ಯನೂ ಸಹ ವಿವಿಧ ಸ್ವಭಾವದ ಈ ಪ್ರಪಂಚವನ್ನು ನಮಗಾಗಿ ಪಳಗಿಸಿ ತೋರಿಸುತ್ತಿದ್ದಾನೋ ಏನು? ಈ ಪರಿಚಿತ ಪ್ರಪಂಚ ಹಗಲಿನದೊಂದು ಪವಾಡವಲ್ಲವೆ? ಹಗಲಲ್ಲಿ ನಿರಾತಂಕವಾಗಿ ನಾವು ಸಂಚರಿಸುತ್ತಿದ್ದ ಜಾಗಗಳೆಲ್ಲ ರಾತ್ರಿಯಲ್ಲಿ ಎಷ್ಟು ಅಪರಿಚಿತ ಸ್ಥಳಗಳಂತೆ ತೋರಿ ಅಂಜಿಕೆ ಮೂಡಿಸುತ್ತವೆ!

೨೯. ಕೇಡನು ಹಾರದೆ—ಕೇಡನ್ನು ಹಾರೈಸದೆ, ಎಂದರೆ, ಏನೋ ಕೆಟ್ಟದ್ದು ನಮಗಾಗಿ ಕಾದಿದೆ ಎಂಬ ಶಂಕೆಯನ್ನು ತಾಳದೆ.

೩೦. ತಪಬಲ—ತಪದ ಬಲ; ಶುದ್ಧ ಸಂಸ್ಕೃತ ರೂಪ ತಪೋಬಲವೆಂದು.

ಪಾವಕನರ್ಚಿಸೆ—ಪಾವಕನ+ಅರ್ಚಿಸೆ, ಅಗ್ನಿಯನ್ನು ಪೂಜಿಸಲು.

೩೧. ತಪದಾಣ—ತಪದ+ತಾಣ.

ತಪವುರುಹಲ್—ತಪವ+ಉರುಹಲ್, ತಪಸ್ಸನ್ನು ಸುಡಲು.

೩೨. ಬಾಳನೆನ್ನೆವರಂ—ಬಾಳಂ+ಎನ್ನೆವರಂ, ಬಾಳನ್ನು ಎಂದುವರೆಗೆ, ಎಷ್ಟು ಕಾಲ.

ನೋಂಪಿ—ವ್ರತ.

೩೩. ಕಾವನ—ಕಾಮನ.

ಅರಿಯೆ ವಿಫಲ ಜೀವನ—ಬಾಳೆಲ್ಲ ಬರಡಾಗುತ್ತಿರುವುದನ್ನು ತಿಳಿಯೆ.

ಸೆಳೆತವರಿಯೆ—ಸೆಳೆತವ+ಅರಿಯೆ.

೩೪. ಬುವಿಯೊಳಡಿಯಿಟ್ಟವುರ ಪಥವನು ಮುಟ್ಟ ಮರೆಗೊಂಡಂತೆ ವಾಮನ—ಮನುಷ್ಯ ಗಗನಕ್ಕೆ ಬೆಳೆದರೂ ಸಹ ಭೂಮಿಯ ಮೇಲೆಯೇ ಕಾಲಿಟ್ಟಿರುವುದು ಅನಿವಾರ್ಯ. ದೇವತೆಯೋ ನೆಲವನ್ನು ನಾಲ್ಕು ಬೆರಳು ಬಿಟ್ಟು ನಿಲ್ಲಬಲ್ಲನೇ ಹೊರತು ಎಂದಿಗೂ ಮೆಟ್ಟಿ ನಿಲ್ಲಲಾರ. ಗೌತಮ ಇಂದ್ರರಿಬ್ಬರೂ ಈ ಅಸಾಧ್ಯಸಾಹಸದಲ್ಲಿ ತೊಡಗಿ ನಮ್ಮ ಮರುಕಕ್ಕೆ ಪಾತ್ರರಾಗುತ್ತಾರೆ ಈ ನಾಟಕದಲ್ಲಿ.

೩೭. ನೂರು ಹೆಂಗಳ ಕಂಡೆ—ಅಹಲ್ಯೆಗೆ ಹೊರತು ಇಂದ್ರ ಬೇರೊಂದು ಹೆಣ್ಣಿಗೆ ಮರುಳಾದ ಪ್ರಸಂಗಗಳಿಲ್ಲವೆಂದು ತೋರುತ್ತದೆ. ಪುರಾಣಜ್ಞರು ಹೇಳಬೇಕು.

೩೯. ಮೋದ ಕೈತವಂ—ನಲಿವಿನ ನೆಪ, ಜೂಜು, ವಂಚನೆಯ ಹೊಂಚಾಟ.

೪೦. ಬಾನ ಬಟ್ಟೆಗೆ—ಆಕಾಶದ ದಾರಿಗೆ.

೪೧. ಸಿಗ್ಗನುಳಿಯಿತು ಕಾಳವು—ತನ್ನ ಸಂಕೋಚವನ್ನು ಬಿಟ್ಟು ಪ್ರಸನ್ನವಾಯಿತು ಇರುಳು.

೪೨. ವಿಜಯಕೆ ಸಂದ ಕಂಪಿನ ಮಾನದಿ—ಕಾರ್ಮೋಡಗಳನ್ನೋಡಿಸಿ ಬೆಳದಿಂಗಳನ್ನು ತಂದ ಜಯಶಾಲಿಗೆ ತಕ್ಕ ಸನ್ಮಾನವೆಂಬಂತೆ ನೆಲ ಮಲೆ ಹಳುವುಗಳು ಗಾಳಿಗೆ ತಮ್ಮ ತಮ್ಮ ಸುಗಂಧಗಳನ್ನು ನೀಡಿವೆ.

ಸೌಮ್ಯನು—ಯಾವ ಉದ್ರೇಕಕ್ಕೂ ಒಳಗಾಗುವ ಮನೋವೃತ್ತಿಯುಳ್ಳವನು. ಕಲೆಗೆ ಚಿತ್ತೈಕಾಗ್ರತೆ ಅವಶ್ಯಕ. ಮನಸ್ಸು ಸುಪ್ರಸನ್ನವಾಗಿದ್ದರೆ ಮಾತ್ರ ಇದು ಲಭಿಸುತ್ತದೆ.

೪೪. ಉನ್ಮನಂ—ರಾಗೋದ್ರಿಕ್ತವಾಗಿದೆ, ಆಸೆಯಿಂದ ಕುದಿಯುತ್ತಿದೆ.

ಬದುಕರೂಪಾಯ್ತೆಂದು—ಬದುಕು+ಅರೂಪು+ಆಯ್ತೆಂದು "ಅರೂಪು" ದೇಸೀ ಮಾತು; ಹದಗೆಟ್ಟಿದೆ ಎಂಬ ಅರ್ಥದಲ್ಲಿ ಉಪಯೋಗಿಸುತ್ತಾರೆ.

ಈ ಪುಟ ಪೂರ್ತಿ—ಸಹಜವೂ ಗೃಹಸ್ಥಾಶ್ರಮೋಚಿತವೂ ಆದ ಕಾಮವನ್ನು ದಮಿಸುವ ಅಕಾಲಿಕ ತಪಸ್ಸು, ಆ ತಪಸ್ಸನ್ನು ಹಿಡಿದ ಬಳಿಕ ಅದು ತನ್ನ ಸಿದ್ಧಿಯನ್ನು ಮುಟ್ಟಲೀಯದ ಅಕಾಲಿಕ ಕಾಮದುರವಣೆ—ಇದು ಗೌತಮನ ದುರಂತಕ್ಕೆಲ್ಲ ಹೊಣೆ. ಈ ಅಕಾಲಿಕ ಕಾಮಕ್ಕೆ ತಾನೊಳಗಾದುದನ್ನು ಸಮರ್ಥಿಸಿಕೊಳ್ಳು

ವುದಕ್ಕಾಗಿ ಈ ಪುಟದಲ್ಲಿನ ವಾಕ್ಯಗಳನ್ನು ಗೌತಮನಾಡಿಕೊಂಡು ತನಗೆ ತಾನೆ ಸಮಾಧಾನ ತಂದುಕೊಳ್ಳಲು ಯತ್ನಿಸುತ್ತಾನೆ. ಹುರುಳಬಲ್ಲ ಮೈತ್ರೇಯನನ್ನು ಅವು ಮರಳು ಮಾಡಲಾರವು.

೪೮. ಲೋಗರ—ಲೋಕದ ಜನರ.

೪೯. ಪುಷ್ಪಕ—ಕುಬೇರನ ಗಾಳಿತೇರು.

೫೦. ನೆಲ ಸೋಕಿ ಸೋಕದೊಲು ನಡ ಹಗುರ—೩೪ನೆಯ ಪುಟದ ಟಿಪ್ಪಣಿಯನ್ನು ನೋಡಿ. ಅಹಲ್ಯೆಯ ಮನಸ್ಸೂ ತುಂಬಿದುಲ್ಲಾಸದಿಂದ ಹಗುರವಾಗಿ ಗಾಳಿಯೇರಿದಂತಿರುವುದರಿಂದ ಇಂದ್ರನ ಈ ನೆಲ ಸೋಕಿ ಸೋಕದ ಹಗುರು ನಡಗೆ ಅವಳಿಗೆ ಬೆರಗಾಗಿಸುವುದಿಲ್ಲ.

೫೪. ಹರಕೆಯುತ ಮಂಗಳಕೆ—ವಧು ಪತಿಯೊಡನೆ ಸಕಲ ಸೌಭಾಗ್ಯದಿಂದ ಬಾಳಲೆಂದು ಮೊದಲು ದೇವತೆಗಳಿಗೆ ಅವಳನ್ನು ಅರ್ಪಿಸುವುದು ಮದುವೆಯ ಶಾಸ್ತ್ರಗಳಲ್ಲಿ ಒಂದು.

೫೫. ಮಳ್ಳಿ—ಮರುಳು ಹೆಣ್ಣು ಎಂಬರ್ಥದಲ್ಲಿ.

೫೭. ಸುರಪಥದೊಳು....ನಿನ್ನ—ಅಹಲ್ಯೆ ಇಂದ್ರರು ಕೂಡುವುದು ನೆಲದ ಮೇಲಲ್ಲ. ನೆಲಕ್ಕೂ ಸ್ವರ್ಗಕ್ಕೂ ನಡುವಣ ಅಂತರಿಕ್ಷದಲ್ಲಿ !

೬೧. ಪರಿಷ್ವಂಗ—ಆಲಿಂಗನ, ಅಪ್ಪುಗೆ.

೬೫. ತಾನೆನ್ನುವ ಮರೆಗಾಗಲು—ಅಹಂಕಾರ ಆತ್ಮದ ಬೆಳಕನ್ನು ಆವರಿಸಲು ಅದು ಆ ತುಚ್ಛವಾದ ಅಹಂಕಾರವನ್ನಲ್ಲದೆ ಮತ್ತಾವುದನ್ನು ಬೆಳಗೀತು? ಅಹಂಕಾರದ ಒಂದು ದೊಡ್ಡ ದೋಷವಿದು—ಭೂಮ ಸಂಪರ್ಕ ವಿಚ್ಛೇದನ.

೬೬. ಗಾಳಿಗಳೂಳುವ ಗೋಳಿನ ಬೀಡು—ಗಾಳಿಗಳು+ಊಳುವ+ಗೋಳಿನ ಬೀಡು. ದೆವ್ವಗಳು ಅಳುವ ಹಾಗೆ ವಿಕಾರವಾಗಿ ಕೂಗಿಕೊಳ್ಳುವ ಶ್ಮಶಾನ. ಅಹಲ್ಯೆ ಆಗಲೇ ಗಾಳಿಯ ಹಾಗೆ ಗೋಳಿಡಲು ಮೊದಲಿಟ್ಟಿದ್ದಾಳೆ!

೭೪. ಬಯಲು ಬಗೆಗೆ—ಬರಿದಾದ ಮನಸ್ಸಿಗೆ, ಶುಷ್ಕ ಹೃದಯಕ್ಕೆ.

೭೮. ಕೇತು ತುಡುಕಲು....ಎಂದರಿವೊಲು—ಸೂರ್ಯಗ್ರಹಣವಾದಾಗ ಆಕಾಶದಲ್ಲಿ ಹಗಲಿನಲ್ಲೇ ನಕ್ಷತ್ರಗಳು ಹೊಳೆಯುವುದು ಕಂಡುಬರುತ್ತದೆ. ತನ್ನೈಶ್ವರ್ಯ ಕಂದುತ್ತಿರಲು ಹಗಲು ತನ್ನ ಒಳಗಣ್ಣನ್ನು ತೆರೆದು ಆತ್ಮ ನಿರೀಕ್ಷಣವನ್ನು ಮಾಡಿಕೊಳ್ಳುತ್ತಿದೆಯೋ ಎಂಬಂತಿದೆ ಈ ದೃಶ್ಯ. ಹಾಗೆಯೇ ಗೌತಮನೂ ಸಹ ತಪಸ್ಸನ್ನು ನೀಗಿಕೊಂಡು ಕಳೆಗುಂದಿ ತನ್ನ ಬುದ್ಧಿಯ ಹೊಳಪನ್ನು ತನ್ನ ಮೇಲೆಯೇ ಚೆಲ್ಲಿಕೊಂಡು ತನ್ನೊಳಗನ್ನು ನಿರೀಕ್ಷಿಸುತ್ತಿದ್ದಾನೆ.

ಮುನಿ ಕೃತಜ್ಞನಾಗಿ ಹೆರಳು ತನ್ನಳಾದ ತೆರಗಳಂ—ಇದು ಸ್ತ್ರೀಪುರುಷರ ತಾರುಣ್ಯ ಸಹಜವಾದ ಕಾಮಕ್ಕೆ ಸಂಬಂಧಪಡುವ ವಿಷಯವಲ್ಲ; ಇದರ ಸ್ವಾರಸ್ಯವನ್ನು ಅರಿತುಕೊಳ್ಳಲು ಕಾಲ ಬೇಕು. ತುಂಬ ಅನುಭವ ಬೇಕು.

ಅಶೋಕವನದಲ್ಲಿ ಸೀತೆ ರಾಮನನ್ನು ನೆನೆದುಕೊಳ್ಳುವಾಗ "ಕೃತಜ್ಞಂ, ಪ್ರಿಯವಾದಿನಂ" ಎಂಬ ಮಾತುಗಳನ್ನು ಹೇಳುತ್ತಾಳೆ. ಇಂಥ ನುಡಿಗಳು ಪ್ರೇಮಿಷ್ಠರ ಸ್ವತ್ತು. ಆದರೆ ಪ್ರೇಮವೋ, ಪ್ರಾಯಶಃ ಮನುಷ್ಯನಿಗೆ ದುರ್ಲಭವಾದ ವಸ್ತುವೋ ಏನೋ.

೮೩. ನಿರಮರ್ಷಣ—ಕ್ರೋಧ ಮಾತ್ಸರ್ಯಗಳಿಲ್ಲದವನು.

೮೪. ತಿರೆಯ ಹರಡುವಂತೆ....ವಿಪುಳಾರ್ಣವ ಬಂಧದೊಳ್—ಪ್ರಕೃತಿಬಂಧದಿಂದ ಬ್ರಹ್ಮಬಂಧಕ್ಕೆ ಪ್ರತಿ ಜೀವವೂ ಹೀಗೆ ಯಾತ್ರೆ ಹೊರಟಿದೆಯೋ ಏನು ?

೮೫. ಇಂದುವರೆಗು....ಸೂತ್ರದಲ್ಲಿ ಕೋದವೊಲ್—ಎಲ್ಲ ವಸ್ತುಗಳಲ್ಲೂ ವ್ಯಕ್ತಿಗಳಲ್ಲೂ ಒಂದೊಂದು ವಿಶಿಷ್ಟ ಗುಣವಿರುತ್ತದೆ. ಆ ವಿಶಿಷ್ಟಗುಣವೇ ಮಿಕ್ಕೆಲ್ಲವುಗಳ ಕೊರತೆ, ಅರಕೆ, ಹಾರೈಕೆ. ಒಂದು ಹಾರೈಸುವುದನ್ನು ಮತ್ತೊಂದು ಹೊಂದಿ ಪರಸ್ಪರಪೂರಕವಾಗಿರುವುದರಿಂದ ಎಲ್ಲವೂ ಪರಸ್ಪರ ಬದ್ಧವಾಗಿವೆ. ಇವನ್ನು ಬಂಧಿಸುವ ಸೂತ್ರವೆ ಜ್ಞಾನ—ವಿಷಯ ವಿಷಯಿತೆ.

ತನ್ನಪೂರ್ಣತೆಯನೆ ತೋರಿ—ತನ್ನ+ಅಪೂರ್ಣತೆಯನೆ+ತೋರಿ. ತನ್ನ ಕೊರತೆಯನ್ನು ತೋರಿ, ತನ್ಮೂಲಕ ಹಾರೈಕೆಯನ್ನು ದ್ಯೋತಿಸಿ.

೮೬. ವ್ಯಕ್ತಿಯಂ ಬ್ರಹ್ಮದೊಳು ಕರಗಿಸುವ ಕಲೆ ನಾನು—ವ್ಯಕ್ತಿ ಅತಿ ಕಠಿಣವಾದ ವಸ್ತು, ವಜ್ರಕ್ಕಿಂತ ಕಠಿಣ. ದ್ವೈತ ವಿಶಿಷ್ಟಾದ್ವೈತಗಳಲ್ಲಿ ಪರಮಾತ್ಮನಿಗೆ ಸಹ ಅದನ್ನು ಕರಗಿಸಲು ಅಸಾಧ್ಯವಾಗಿದೆ. ಆದರೆ ಪ್ರೇಮಕ್ಕೆ ಮಾತ್ರ ಈ ಶಂಕೆಯಿಲ್ಲ.

೮೮. ಅನೂರುಸೂತಂ—ಯಾರಿಗೆ ತೊಡೆಯಿಲ್ಲದವನು ಸಾರಥಿಯಾಗಿದ್ದಾನೆಯೋ ಅಂಥವನು. ಅರುಣನನ್ನು ಸಾರಥಿಯಾಗಿಯುಳ್ಳ ಸೂರ್ಯ.

೮೯. ಧರ್ಮವ ಬಿಡು ನೀ—"ತ್ಯಜ ಧರ್ಮಮಧರ್ಮಂ ಚ ಉಭೇ ಸತ್ಯಾನೃತೇ ತ್ಯಜ। ಉಭೇ ಸತ್ಯಾನೃತೆ, ತ್ಯಕ್ತ್ವಾ। ಯೇನ ತ್ಯಜಿಸಿ ತತ್ ತ್ಯಜ॥" ಎಂಬ ಋಷಿವಾಕ್ಯ ಇದರ ಮೂಲ.

ಇರುವಾನಂದವೆ ಇದರವಸಾನಂ—ನಿರುಪಾಧಿಕ ಅಹಮಸ್ಮಿತಾಯೋಗವೇ ಇದರ ಕಡೆ ನೆಲೆ—ಜೀವ ಬ್ರಹ್ಮಭೂತವಾಗಿ ಹೇಳುವ ಮಾತು.

೯೯. ನಿಯಮ ರಕ್ಷಿತ ಧರ್ಮದಂದದಿ—ನಗರದ ಸುತ್ತಲೂ ಇರುವ ವನೋಪವನಗಳಲ್ಲಿ ಋಷಿಗಳೂ ಮುನಿಗಳೂ ತಮ್ಮ ತಮ್ಮ ಆಶ್ರಮಗಳನ್ನು ಕಲ್ಪಿಸಿಕೊಂಡು ವಾಸಮಾಡುತ್ತಿದ್ದುದು ಅಂದಿನ ವಾಡಿಕೆಯಂತೆ ತೋರುತ್ತದೆ. ಇವರೆಲ್ಲ ಜಿತೇಂದ್ರಿಯರು. ಜಿತೇಂದ್ರಿಯರ ನಡುವೆ ಮಾತ್ರ ಧರ್ಮ ಸುರಕ್ಷಿತವಾಗಿರಬಲ್ಲದು. ಹಾಗಿದೆ ಮಿಥಿಲೆ ಋಷ್ಯಾಶ್ರಮ ಪರಿವೃತವಾಗಿ. ನಾಗರಿಕತೆಯ ಉತ್ತರೋತ್ತರ ಜೀವನ ವ್ಯವಸ್ಥೆಯನ್ನು ಆಶ್ರಮವಾಸಿ ಜನರು ಸೂಚಿಸುತ್ತಾರೆ. ಅನಾಗರಿಕ ವನ್ಯಜನ ಜೀವನವನ್ನಲ್ಲ.

೧೦೦. ನಡುಗಿಡದೊಳು....ಗರಿಕೆಯ ಕಣ್ನೋಡಿ—ಮರದಮೇಲೆ ಎತ್ತರದಲ್ಲಿ ಗಾಳಿಗಲುಗಾಡುತ್ತಾ ಬಿದ್ದರೇನು ಗತಿ ಎಂದು ಅಂಜುತ್ತಿರುವ ಹೂವು ಕೆಳಗೆ ಹರಡಿರುವ ಮೆತ್ತನೆಯ ಗರಿಕೆಹುಲ್ಲಿನ ಹಾಸನ್ನು ನೋಡಿ ಬಿದ್ದರೂ ನನಗೇನೂ ಆಗದು ಎಂದು ಧೈರ್ಯ ತಂದುಕೊಳ್ಳುವಷ್ಟು ಮೃದುವಾಗಿಯೂ ಒತ್ತಾಗಿಯೂ ಹರಡಿದೆ ನೆಲದ ಮೇಲೆ ಆ ಹುಲ್ಲು.

ತರ್ಪಿಸುವೀ—ತರ್ಪಿಸುವ+ಈ-ತಣಿಸುವಂಥ.

೧೦೧. ಮೇಣಿದದೂರ ಗ್ರಾಮ—ಮೇಣ್+ಇದು+ಅದೂರ ಗ್ರಾಮ, ಮತ್ತು ಇದು ಗ್ರಾಮಕ್ಕೆ ದೂರವಾಗಿಲ್ಲ, ಊರ ಸನಿಯದಲ್ಲೇ ಇದೆ.

೧೦೨. ಇದಮಂಗಳವಾಗಿದ್ದೊಡೆ—ಇದು + ಅಮಂಗಳವಾಗಿದ್ದೊಡೆ. ಈ ಜಾಗ ಪ್ರಶಸ್ತವಲ್ಲದಿದ್ದರೆ.

೧೦೪. ಇಂಧನವುಳಿಪೊಗೆಯನೆ ನೆಮ್ಮುವ ಉರಿಯಂತೆ—ಸೌದೆಯನ್ನು ಬಿಟ್ಟು ಆದರಿಂದ ಹೊರಡುವ ಹೊಗೆಯನ್ನೇ ನಂಬಿಕೊಂಡು ಅದರ ಸೆರಗನ್ನು ಹಿಡಿದಷ್ಟು ದೂರ ಏರಿಹೋಗಿ ನಂದಿಹೋಗುವ ಉರಿಯ ಹಾಗೆ.

೧೦೫. ಮರುಕದಿಂ ಸ್ನಾತಾಂತರಂಗದಿಂ ಆರ್ತರುದ್ಧರಣಕ್ಕೆ ತಕ್ಕನಾದೆ—ಮರುಕದಿಂ+ಸ್ನಾತ+ಅಂತರಂಗದಿಂ. ಮನಸ್ಸಿನ ಜಳಕಕ್ಕೆ ಮರುಕವೇ ತಕ್ಕ ನೀರು. ಅಂಥ ನೀರಿನಲ್ಲಿ ಸ್ನಾನ ಮಾಡಿ ಶುದ್ಧಾಂತಃಕರಣವನ್ನು ಹೊಂದಿ ರಾಮ ಆರ್ತರ ಉದ್ಧಾರಕ್ಕೆ ಅರ್ಹತೆಯನ್ನು ಪಡೆದ. ಸಮಾಜ ಕಲ್ಯಾಣವನ್ನು ಸಾಧಿಸಲು ಹೊರಡುವವರು ಆಲೋಚಿಸತಕ್ಕ ವಿಚಾರವಿದು.

೧೦೬. ಹೊಗೆಯ ಮುಸುಕಿಂ—ಇಲ್ಲಿ ಹೊಗೆ ಬೆಂಕಿಗಳ ಅದೇ ಚಿತ್ರವನ್ನೇ ಬೇರೊಂದು ಭಾವಕ್ಕೆ ಅಳವಡಿಸಿದೆ.

೧೧೧. ಪರಿತಾಪಶ್ರಾಂತೆ ಪರಿತಾಪದಿಂದ ಬಳಲಿದವಳೇ.

೧೨೦. ನವಸುಷಮ—ಹೊಸ ಕಾಂತಿ.

೧೨೧. ಮರೆತು ಹೋದ ಮರದಂತೆ—ಹೂ ಕಾಯಿ ಹಣ್ಣುಗಳನ್ನು ಬಿಡದೆ ಬಂಜೆಯಾದ ಮರದ ಹಾಗೆ.

೧೨೨. ಬಂದ ಬನದಿ ಬಂಡುಣಿಯೊಲು—ಚಿಗುರು ಹೂ ಮಿಡಿಗಳಿಂದ ಸೊಂಪಾದ ಮಾಮರ ; ಆ ಮರದಲ್ಲಿ ಝೇಂಕರಿಸುವ ದುಂಬಿಗಳಂತೆ.

೧೨೪. ಸುಹೃನ್ಮಾನಸ ಸರದಲಿ—ಮಾನಸಸರೋವರ ಹಂಸಗಳಿಗೂ ಕಮಲ ಕುಮುದ ಕಲ್ಹಾರಾದಿ ಕುಸುಮಗಳಿಗೂ ಆಶ್ರಯವಾಗಿ ಸದಾ ನಿರ್ಮಲ ನೀಲ ಜಲದಿಂದ ತುಂಬಿ ತಣ್ಣಗಿದೆ. ಸುಹೃದರ ಮನಸ್ಸೂ ಹೀಗಿದೆ. ಅದರಲ್ಲಿ ಈ ಕೃತಿಸುಮ ಕಂದದೆ ಕಂಪುಗೂಡಿ ಅರಳುತ್ತಿರಲಿ ಎಂದು ಕವಿಯ ಹರಕೆ.

## ಪು. ತಿ. ನ. ಅವರ ಕೃತಿಗಳು

**ಕವಿತಾ ಸಂಗ್ರಹಗಳು**

ಹಣತೆ, ಮಾಂದಳಿರು, ಶಾರದಯಾಮಿನಿ, ಗಣೇಶ ದರ್ಶನ, ಮಲೆ ದೇಗುಲ, ರಸ ಸರಸ್ವತಿ, ಹೃದಯ ವಿಹಾರಿ

**ನಾಟಕಗಳು**

ಅಹಲ್ಯೆ, ಗೋಕುಲ ನಿರ್ಗಮನ, ಶಬರಿ, ಕವಿ ಮತ್ತು ದೋಣಿಯ ಬಿನದ, ವಿಕಟಕವಿವಿಜಯ, ಹಂಸ ದಮಯಂತಿ (ಎಂಟು ಗೀತ ರೂಪಕಗಳ ಸಂಗ್ರಹ) ಶ್ರೀರಾಮ ಪಟ್ಟಾಭಿಷೇಕ, ಸತ್ಯಾಯನ ಹರಿಶ್ಚಂದ್ರ, ಜಾಹ್ನವಿಗೆ ಜೋಡಿ ದೀವಿಗೆ (ಆರು ಏಕಾಂಕಗಳ ಸಂಗ್ರಹ)

**ಪದ್ಯಾನುವಾದಗಳು**

ಸಿರಿಬಾಯಿ ನುಡಿ, ಭಗವದ್ಗೀತೆ, ಮಹಾಪ್ರಸ್ಥಾನ (ಭಾರತ ರಾಮಾಯಣ ಗಳಲ್ಲಿನ ನಾಯಕ ಪಾತ್ರಗಳ ನಿರ್ಯಾಣ) (ಫೌಸ್ಟ್ ಪ್ರಥಮ ಭಾಗ)

**ಕಥೆ, ಪ್ರಬಂಧಗಳು**

ರಾಮಾಚಾರಿಯ ನೆನಪು, ಧ್ವಜರಕ್ಷಣೆ, ರಥಸಪ್ತಮಿ, ಈಚಲುಮರದ ಕೆಳಗೆ, ಧೇನುಕ ಪುರಾಣ

**ವಿಮರ್ಶಾತ್ಮಕ ಪ್ರಬಂಧಗಳು**

ಕಾವ್ಯ ಕುತೂಹಲ

ಬೆಲೆ . 4·50

ಡಿ. ವಿ. ಕೆ. ಮೂರ್ತಿ : ಕೃಷ್ಣಮೂರ್ತಿಪುರಂ : ಮೈಸೂರು-೪